# ಕಾನನ

ನಿಸರ್ಗದೆಡೆಗೆ ಪಯಣ


**ಸಂಪಾದಕೀಯ**

ಶಂಕರಪ್ಪ ಕೆ.ಪಿ

**ಲೇಖನ ವೃಂದ**

ಶಂಕರಪ್ಪ ಕೆ.ಪಿ

ಮುರಳಿ ಎಸ್

ಅಮರ್ ಶರ್ಮ

ಕೃಷ್ಣನಾಯಕ್

**ಕರಡು ತಿದ್ದುಪಡಿ**

ಮುರಳಿ ಎಸ್

**ಛಾಯಾಚಿತ್ರ**

ಕಾರ್ತಿಕ್ ಎ.ಕೆ

**ಇ-ವಿಳಾಸ**

kaanana.mag@gmail.com

www.issuu.com/kaanana

**ಮುಖಪುಟ**

ಜಿಂಕೆ ಮತ್ತು ಮರಿ

BANNERUGHATTA WILDLIFE CONSERVATION GROUP






























# ಸಂಪಾದಕೀಯ

ಹುದ್ - ಹುದ್ ಚಂಡಮಾರುತದ ಪರಿಣಾಮಾವೋ, ಬಂಗಾಳಕೊಲ್ಲಿನ ವಾಯುಬಾರಕುಸಿತದಿಂದಲೋ ಏನೊ ಕಾಡಿಗೆ ಚಿತ್ತೆಮಳೆ ದೋ ಎಂದು ಸುರಿದಿದೆ. ಹಳ್ಳಗಳು ತುಂಬಿ ಉಕ್ಕಿ ಹರಿದಿವೆ. ಕೆರೆಗಳು ಕೋಡಿ ಬಿದ್ದಿವೆ. ಸದ್ಯಕ್ಕಂತೂ ಕಾಡು ಹಚ್ಚಹಸುರಾಗಿ ನಂದನದ ತುಣುಕೊಂದು ಭೂಮಿಗೆ ಬಿದ್ದಂತೆ ಬಾಸವಾಗುತ್ತಿದೆ.

ಬಿದಿರುಕಳಲೆಗಳು ನೆಲದೊಡಳನ್ನು ಸೀಳಿ ಮೇಲೆದ್ದಿವೆ. ನಾನಾ ತರವರಿ ಅಣಬೆಗಳು ಗುಂಪುಗುಂಪಾಗಿ ಬೆಳೆದಿವೆ. ಕಾಲ ಚಕ್ರ ಉರುಳು ಉರುಳುತ್ತಿದ್ದಂತೆ ಬದಲಾಗುವ ಈ ಪ್ರಕೃತಿಯ ನಿಯಮವನ್ನು ಅರಿಯಲು ಯತ್ನಿಸುವುದೇ ಒಂದು ಮಹಾತಪಸ್ಸು!

ಪ್ಯೂಪಾವಸ್ತೆಯಲ್ಲಿದ್ದ ನಮ್ಮ ಕಾನನ ತಂಡ ಹೊಸ ಹುರುಪಿನೊಂದಿಗೆ ಬಣ್ಣ ಬಣ್ಣದ ಚಿಟ್ಟೆಯಾಗಲು ಕುಕೂನ್ ಆಗಿದೆ. ಹೊಸದಾಗಿ ಈ ಬಾರಿ ಕೀಟಲೋಕವನ್ನು ಪ್ರಾರಂಭಿಸಿದ್ದೇವೆ. ಕೆರೆಗೆ ಹೊಸ ನೀರು ಬಂದಿದೆ. ಬಾನಂಚಿನ ಬಾಹ್ಯಾಕಾಶಕ್ಕೆ ಕನ್ನಡಿ ಹಿಡಿಯುವ ಪ್ರಯತ್ನಕ್ಕಾಗಿ ಕಾನನಕ್ಕೆ ಕೈ ಜೋಡಿಸಿದ ಅಮರ್ ಶರ್ಮರವರು ಖಗೋಳದ ವಿಸ್ಮಯವನ್ನು ತೆರೆದಿಟ್ಟಿದ್ದಾರೆ. ಹೊಸ ಹವ್ಯಾಸದ ಆಳ-ತಳವನ್ನು ಪರಿಚಯಿಸಿದ್ದಾರೆ.

ಕೀಟಲೋಕಕ್ಕೆ ಬೆಳಕಿಂಡಿಯಂತೆ, ರಾತ್ರಿ ಕಂಡ ಮಿಡತೆಯ ಜಾಡುಹಿಡಿದು ಸಾಗಿ ಜೀವರಾಶಿಗಳ ಬಲೆಯಂತೆ ಸಾಗಿ ಕೊಲಾಜ್ ಮಾದರಿಯಲ್ಲಿ ಮಿಡತೆಯ ನಡತೆಯನ್ನು ಮುರಳಿಯವರು ಸರಳವಾಗಿ ಸಂಕೀರ್ಣವಾದ ವಿಚಾರವನ್ನು ತಿಳಿಸಿದ್ದಾರೆ . ಜೀವದ ಹುಟ್ಟು ಹಾಗೂ ವಿಕಾಸವನ್ನು ಮಹಾಸ್ಫೋಟದಿಂದ ಆರಂಭಿಸಿ ಜೀನ್ ವರಿಗೂ ಕಲಾತ್ಮಕವಾಗಿ ವಿಚಾರ ಧಾರೆಯನ್ನು ತಮ್ಮ ಕವನದಲ್ಲಿ ವರ್ಣಿಸಿದ್ದಾರೆ .



ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ,
ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು
ಹಾಗೂ ಲೇಖನಗಳನ್ನು ತಾವೂ
ಕಾನನಕ್ಕೆ ಬರೆಯಬಹುದು.



# ಚಿರತೆ ರೋಡ್ ಕಿಲ್ !!

ಆ ಕೋಳೀ ಫಾರಂ ಹತ್ತಿರ ! ಚಿರತೆ ಸೊತ್ತೋಗದಂತೆ . . . . ಅಯ್ಯೋ“, ಅವನ್ಯಾವನೋ ಕಾರೋನು ಗುದ್ದಿಕೊಂಡು ಹೊಂಟೋಗವನಂತೆ , ತಲೆಮ್ಯಾಲೆ ಎಕ್ಕಿಸಿಬಿಟ್ಟವನಂತೆಎಂದು ಬೆಳಿಗ್ ”ಗೆ ಹಾಲು ಡೈರಿಗೆ ಹಾಲು ಹಾಕಿ ಬಂದ ಪಾಯನು ನಮ್ಮೂರಿನ ಲೌಡ್ ಸ್ಪೀಕರ್ ಕಂ FM ಆದ ಶಾರದಿಗೆ ಸೈಕಲ್ಲಿನ ಮೇಲೆ ಕುಳಿತೇ ವರದಿ ಒಪ್ಪಿಸುತ್ತಿದ್ದ . . ಏ ಸತ್ರೆ ಸಾಯ್ತದೆ ತಗೊಳೋಲೆಲೆ .!



ಅದು ಹೋದುದ್ದೇ ಒಳ್ಳೇದಾಯ್ತು ನನ್ನ ನಾಯಿ ಮರೀನಾ ಕಮಕ್ - ಕಿಮಕ್ ಎಂದು ಸದ್ದು ಮಾಡದಂಗೆ ಕತ್ತು ಮುರಿದು ಒತ್ಕೊಂಡೊಯ್ತು ಅದರ ಪಡೆ ಕಿತ್ತೋಗ .ಎಂದು ನಟಿಕೆ ಮುರಿದಳು . . ಈ ಎಲ್ಲಾ ಮಾತುಗಳನ್ನು ಸಾವಧಾನವಾಗಿ ಕೇಳುತಿದ್ದ ಪಾಯನು ಅಷ್ಟೇ ಆಗಿದ್ರೆ . . ಅಯ್ಯೋ ಶಾರದಕ್ಕಾ" ಫಲ ಆಗಿತ್ತಂತೆ ಚಿರತೆ . . ಪರ್ವಗಿರಲಿಲ್ಲಾ, ಹೊಟ್ಟೆ ಒಳ್ಗೇ ಮೂರು ಮರಿ ಇದ್ವಂತೆ !, ದಾಕುಟ್ರು ಹೊಟ್ಟೆ ಕೊಯ್ದು ಮರಿಗಳನ್ನ ಆಚೆ ತೆಗೆದು ಪೋಸ್ಟ್ ಮಾಟಮ್ ಮಾಡಿದರಂತೆ *"ಒಂದ್ ಗಂಡು- ಎರಡೆಣ್ಣು"* . ಮರಿಗಳು ಇದ್ವಂತೆ ಹೊಟ್ಟೆಲಿ ಎಂದು ಚೋಜಿಗ ಹಾಗೂ ದುಃಖಭಾವ ವ್ಯಕ್ತ ಪಡಿಸಿದ ".

"ಎರಡೆಣ್ಣು -ಒಂದ್ ಗಂಡು" ಎಂಬ ಶಬುದ ಶಾರದಿಯ ಕಿವಿಗೆ ಬಿದ್ದೊಡನೆ ಎಲ್ಲೋ ಕರುಳು ಚುರುಕ್ ಅಂದು ತುಂಬು ಬಸುರಿ ಮಕ್ಕಳೊಂದಿಗೆ ಸತ್ತೋದ ಸಂಗತಿ ವಿಷಾದನೀಯವಾಗಿ ದುಃಖ ತರಿಸಿ , ಅವಳು ತನ್ನಷ್ಟಕ್ಕೆ ತಾನೇ ಎಂಬಂತೆ "ಅಯ್ಯೋ ಪಾಪ ಬಸುರೀ . . . ಮಕ್ಕಳ ಹೊಟ್ಟೆಗಿಸ್ಟು ಊಟಕ್ಕಾಗಿ ಕಾಡು ಬಿಟ್ಟು ಊರೂರು ಅಲೆಯೋ ಹಾಗೆ ಆಯ್ತಲ್ಲೋ . . . . ಆ ಮೂರು ಮಕ್ಕಳ ತಾಯಿನಾ ಒಟ್ಗೆ ತಿಂಕೋ ಬುಟ್ಟನಲ್ಲೋ ಆ ಬೇವಾರ್ಸಿ ಡ್ರೈವರ್ರು " ಎಂದು ಒಂದೇ ಸಮನೆ ಚಿರತೆ ಸಾವಿಗೆ ಕಾರಣನಾದವನ ಕೈಯಿಗೆ, ಕಾಲಿಗೆ, ಗಂಟಲಿಗೆ ಹಾಗೂ ದೇಹದ ವಿವಿದ ಅಂಗಾಂಗಗಳಿಗೆ ಯಾವ ಯಾವ ರೋಗ ತಗುಲಬೇಕು ಎಂದು ಮೆನು ತಯಾರಿ ಮಾಡಿ ಬೈದು ಆಶೀರ್ವದಿಸಿದಳು .

ಆವಗೆಲ್ಲಾ ಇಂಗಿರನಿಲ್ಲ ಕಣ್ ಮರಿಆರ್ ತಿಂಗಳಿಗೋ ಕುರಿನೋ ಮರಿನೋ . . ಏನೋ ವರ್ಷಕ್ಕೋ . ಈ ನಾಯಿ ಮಾಮ್ಸ . ಅದು ಬಿಟ್ರೆ ಊರು ಕಡೆ ತಲೆ ಹಾಕುತ್ತಿರಲಿಲ್ಲ . ಕಾಡ್ ಪಕ್ಕರ್ ಬಂದು ಹಿಡ್ಕೋಳ್ಳೋದು ರುಚಿ ಪಳಗಿದ್ದೇ ನಾಯಿ ಮಾಂಸಾ ಅಂದ್ರೆ ಚಿರತೆಗೆ ಬೆಲ್ಲಾ ಇದ್ದಂಗೆ . ಊರು ಕಡೆ ಬರೆಕೆ ಶುರು ಮಾಡಿಕೊಂಡ್ವು ! ಗಾಳಿಯಂತೆ ನಿಶ . ಎಂದು ವಾದ ಮಂಡಿಸಿದಳುಬ್ಧವಾಗಿ ಚಲಿಸುವ ಚಿರತೆಯ ನಡಿಗೆಯನ್ನು ಬಣ್ಣಿಸಿದಳು .

"ಸರಿ ಶಾರದಕ್ಕಾ . . . ಟೈಮಾಗೋಯ್ತು ಇನ್ನಾ ಹುಲ್ಲು ಬ್ಯಾರೆ ಕುಯ್ಕೋ ಬರಬೇಕು ಬತ್ತೀನಿ" ಎಂದು ವರದಿ ಮಂಡಿಸಿ ಸೈಕಲ್ಲಿನ ಪೆಡಲನ್ನು ತುಳಿದು ಪಾಯನು ಮುಂದೆ ಸಾಗಿದ . ಆ ಅವನು ಸಾಗಿದ ರಬಸಕ್ಕೆ ಎದ್ದ ದೂಳಿನಲ್ಲಿ ಚಿರತೆಯ ಮರಣ ವಾರ್ತೆ , ಊರು ತುಂಬಾ ಹರಡಿತು . ಹೆಣ್ಣೆಂಗಸರು ಎಲೆ ಅಡಿಕೆಯನ್ನು ಮೇಕೆ ಸೊಪ್ಪು ಮೇಯೋ ತರದಲ್ಲಿ ತಿಂದು , ಬಸುರಿ ಚಿರತೆ ಸತ್ತ ಕತೆಯನ್ನು ಕೇಳಿ ಮರುಗಿದರು . ಮುದಿತಲೆಗಳು ಬೀಡಿ ಕಚ್ಚಿ ಹೊಗೆ ಬಿಡುತ್ತಾ " ಚಿರತೆಯನ್ನು ಸಾಯಿಸಿದ್ದೇ ಸರಿ , ತೊಂದ್ರೆ ತಪ್ಪು ಎಂದು ತೀರ್ಪಿತ್ತರು.



ಇದನ್ನು ಕೇಳುತ್ತಾ ಬಿಸಿಲಿನಲ್ಲಿ ಮೈ ಬಿಸಿ ಮಾಡುತ್ತಿದ್ದ ಪಾಕಾಳನು " ಏನ್ ಸ್ವಾಮೆ ನೀವ್ ಹೇಳೋದು ?

ಆ ನಮ್ಮ್ ಮನೆದೇವರ್ ವಾಹನಾನ ಕೊಂದೋನು  ಬದುಕತಾನಾ ದೊರೆ ? ಇವತ್ತಲ್ಲಾ ನಾಳೆ ನೋಡ್ಕೋತಾನೇ ದೇವ್ರು " ಎಂದು ವೇದಾಂತ -ಕರ್ಮ ಥಿಯರಿಯನ್ನು ಮುಂದಿಟ್ಟು ಅವರ ಬಾಯಿ ಮುಚ್ಚಿಸಿದ .

ಗೌರ್ಮೆಂಟೋರು ಬರೋ ವರುಗೂ ಯಾರು ಚಿರತೆನ ಮುಟ್ಟಂಗಿಲ್ಲ ಆದ್ದರಿಂದ ರಸ್ತೆಯಲ್ಲೇ ಬಿದ್ದಿದ್ದ ಸತ್ತ ಚಿರತೆಯ ಕಳೇಬರ ನೋಡಾಕೆ  ಜನಾನೋ ಜನ . ಮೂರ್ನಾಲ್ಕು ಕಿಲೋಮೀಟರ್ ರೋಡ್ ಜಾಮ್ ಆಗಿತ್ತು . ಸ್ಪಾಟ್ಗೆ  ಬಂದ ವಾಚರ್ಗೋಳು -ಪೋಲಿಸೋರು ಜನಾನ ಚದುರಿಸಿ ರೋಡ್ ಕ್ಲಿಯರ್ ಮಾಡದ್ರು . ಗಾರ್ಮೆಂಟ್ಸ್ ಫ್ಯಾಕ್ಟ್ರಿಗೋಗೊ ಹೆಣ್ಮಕ್ಕಳು ಬಸ್ಸಲ್ಲೇ ಟಿಪನ್ನು- ತಿಂಡಿ ತಿನ್ನುತ್ತಾ ಕಿಟಕಿಯಿಂದಲೇ ಸತ್ತ ಕಳೇಬರವನ್ನು ನೋಡಿ , ಕೆಲಸಕ್ಕೆ ಟೈಮ್ ಆಯ್ತುದೆ ನಡಿಯಪ್ಪಾ  ಡ್ರೈವರ್ರು ಎಂದು ಬೊಬ್ಬೆ ಹಾಕಿ ರೈಟ್ ಹೇಳಿದರು.

ಖ್ಯಾತ ಬೆಕ್ಕು ಜಾತಿಯ ಪ್ರಾಣಿ ತಜ್ಞರು   ಅವುಗಳಲ್ಲಿ . ಚಿರತೆಗಳು ಸತ್ತಿವೆ 23 ರಿಂದ ಈಚೆಗೆ ಕೇವಲ 2008 ಇತ್ತೀಚೆಗೆ ಇದು ತೀರಾ ಸಾಮಾನ್ಯವಾಗಿ ಬಿಟ್ಟಿದೆ  . ಮಾತ್ರ ರೋಡ್ ಕಿಲ್ಲುಗಳು  ಇವೆಲ್ಲಾ ಕಾಡಿಂದ ಆಚೆ ಸತ್ತಿವೆ 17 ಏನೂ ಮಾಡಕಾಗಲ್ರೀ . ಇದರ ಬಗ್ಗೆ ಕಳವಳ ಬೇಡ; ಫಾರೆಸ್ಟ್ ಎಂಕ್ರೋಚ್ಮೆಂಟ್ , ಪ್ರೇ ಡೆನ್ಸಿಟಿ ಕಮ್ಮಿ ಆಗ್ಬುಟ್ಟಿದೆ ಮುಖ್ಯ ನಮ್ಮ ಜನ ಸರಿಲ್ಲಾರೀ .. ಡಿಪಾರ್ಟ್ಮೆ ಟ  ತಾನೇ ಎನ್ ಮಾಡಕ್ಕಾಗುತ್ತೆ 0?  ಈ ನಾಡ ಬಂದುಕೋರು , ಉರುಳುಕಟ್ಟೋರು , ಮಾಂಸದ ಉಂಡೆಯಲ್ಲಿ ಡೈನಾಮೆಟ್ ಇಕ್ಕೋರು , ಇರೋ ಬರೋ ಜಿಂಕೆ, ಹಂದಿ, ಮೊಲಗಳನೆಲ್ಲಾ  ಹೊಡೆದು ತಿಂದಾಕವರೆ ಪಾಪ ಆ ಚಿರತೆಗಳೂ ತಾನೇ ಎಲ್ಲಿಗೆ ಹೋಗಬೇಕು ಹೇಳಿ ನೀವೇ .? ಅಲ್ಲಾ ನಮ್ಗೆ ಹೊಟ್ಟೆ ಹಸಿವಾದ್ರೆ ಹೋಟಲಿಗೋಗಿ ಆರ್ಡರ್ ಮಾಡಿ  ಬೇಕಾದ್ರೆ    . .ಅವಗೊಳ್ದು ಹೊಟ್ಟೆ ಅಲ್ವಾ . . . ಈ ಕಾಡು ಚಿರತೆ ಎಲ್ಲಿಗೋಗೋದು ಹೇಳಿ . ಬಿರಿಯಾನಿನೇ ತಿಂತಿವಿ?  ಹಾ ಅದಕ್ಕೇ ಅವು ಊರಿಗೆ ಬರತವೆ  . ಮರೀನ ಹಿಡಿದಿಲ್ವಾಲ್-ಸದ್ಯ ಮಕ್ಳು . ಕುರಿನೋ  ಎತ್ತಿ ಕೊಂಡು ಹೋಗ್ತಾವೆ -ನಾಯಿಮರಿನೋ ಕೋಳಿನೋಲಾ  ! ಅದು ನಮ್ಮ ಪುಣ್ಯ ಎಂದು ನಿರಾಳವಾಗಿ ಒಂದೇ ಸಮನೆ ಹೇಳಿ,  ಅರ್ಧಲೀಟರ್ ಬಿಸಿಲರಿ ನೀರು ಕುಡಿದು ಖಾಲಿ ಮಾಡಿದರು.



ಇನ್ನು ಅರಣ್ಯ ಇಲಾಖೆಯ ಘಟಾನುಘಟಿಗಳು  ಸ್ಥಳಕ್ಕೆ ಕುದ್ದು ಆಗಮಿಸಿ " ಇದು ಟೂ-ವೀಲರ್  ಗುದ್ದಿರೋದಲ್ಲ. ಯಾವುದೋ ಪೋರ್ -ವೀಲರ್ದೇ ಕೆಲಸ . ಯಾವ ಗಾಡಿ ಗುದ್ದಿದೆ ಎಂದು ಇನ್ವೆಸ್ಟಿಗೇಷನ್ ಮಾಡಾಕೇ ಪೋಲಿಸ್ ಇಲಾಕೆಗೆ ವರದಿ ಸಲ್ಲಿಸಿದ್ದೇವೆ . ಇನ್ನೂ ಏನೇ ಹೇಳಬೇಕಾದ್ರು ಪೋಸ್ಟ್ಮಾಟಮ್ ರಿಪೋರ್ಟ್ ಬರಬೇಕು ಎಂದು ಹೇಳಿ       ಟಿವಿ ವೋರಿಗೆ ಪೇಪರ್ನೋರಿಗೆ ಸತ್ತ ಚಿರತೆಯ ಮುಂದೆ ತರವರಿ ಪೋಸುಗಳಲ್ಲಿ ಫೋಟೋಗಳನ್ನು ಕ್ಲಿಕ್ಕಿಸಿ ಕೊಂಡರು . ಹೊಸದಾಗಿ ಕೆಲಸಕ್ಕೆ ಸೇರಿದ್ದ ಆಪೀಸರ್ರು

ಚಿರತೆಯ ಜೊತೆ ಹಲ್ಲು ಕಿರಿದು ಸೇಲ್ಫಿ  ಒಂದನ್ನು ತೆಗೆದುಕೊಂಡರು. ಪೋಲಿಸಿನವರು ಚಿರತೆಗೆ ಗುದ್ದಿದ ವಾಹನದ ಚಾಲಕ ಮತ್ತು ಮಾಲಿಕನಿಗಾಗಿ ಬಲೆ ಬೀಸಿದ್ದಾರೆ ಆದರೆ ಇನ್ನೂ ಅವರು ಸಿಗಲಿಲ್ಲ . ಅವರ ಸುಳಿವು ಕೂಡ ಪತ್ತೆಯಾಗಿಲ್ಲ!  ಆ ಸ್ಪಾಟ್ಗೆ ಆಗಮಿಸಿದ ಕೆಲವು ಕಾಲೇಜು ಹುಡುಗ ಹುಡುಗಿಯರೂ ತಮ್ಮ ಸ್ಮಾರ್ಟ್ ಫೋನಿನಲ್ಲಿ ಸತ್ತ ಚಿರತೆಯ ಫೋಟೋ ಹಿಡಿದು ಸ್ಥಳದಲ್ಲೇ  ಫೇಸ್ಬುಕ್ , ವ್ಹಾಟ್ಸ್ ಆಪ್ಗೆ  ಅಪ್ ಲೋಡ್  ಮಾಡಿ ನೂರಾರು ಲೈಕುಗಳನ್ನು ಗಿಟ್ಟಿಸಿದರು

ಚಿರತೆ ರೋಡಿನಲ್ಲಿ ಸತ್ತಿರುವುದರಿಂದ ರಸ್ತೆಯಲ್ಲಿ ಶಾಲೆಗೋಗುವ ಶಾಲಾವಾಹನದಲ್ಲಿ ಕುಳಿತಿದ್ದ ಮಕ್ಕಳಿಗೆ ಟೆಸ್ಟ್ ಇದ್ದರಿಂದ  ಕುಳಿತಲ್ಲೇ ಓದುತ್ತಿದ್ದರು . ಕಿಟಕಿಯಾಚೆ ನೋಡರು, ಅರ್ಧ  ಗಂಟೆ  ರೋಡು ಜಾಮ್ ಆಗಿ ಬಸ್ಸು ನಿಂತಿದ್ದರೂ ತುಂಬಾ ತಾಳ್ಮೆಯಿಂದ ಓದುತ್ತಿದ್ದರು . ಸತ್ತ ಚಿರತೆಯ ಬಗ್ಗೆಯಾಗಲೀ , ನಿಂತ ಬಸ್ಸಿನ ಬಗ್ಗೆಯಾಗಲೀ ಯೋಚಿಸರು ಕಿಟಕಿಯಾಚೆ ನೋಡರು , ಏಕೆಂದರೆ ಸತ್ತ ಚಿರತೆ ಅವರ ಸಿಲಬಸ್ಸಿನಲ್ಲಿ ಇಲ್ಲ ! ಪರೀಕ್ಷೆಗೆ ಬರೋದಿಲ್ಲ ! ಅದಕ್ಕೆ ಯಾವುದೇ ಅಂಕವಿಲ್ಲ. !



ರೋಡು ಜಾಮ್ ಆಯಿತು , ಜನವೋ ಜಾತ್ರೆಯಾಯಿತು . ಎಲ್ಲಿಂದಲೋ ಟಣ್ ಎಂದು ಪ್ರತ್ಯಕ್ಷನಾದ ಕುಡುಕನೊಬ್ಬ ಚಿರತೆಗೆ ಗುದ್ದಿದ್ದು ಬಸ್ಸು , ಎಂದೊಮ್ಮೆ , ಕಾರು ಗುದ್ದಿದ್ದು ನಾನೇ ಕಣ್ಣಾರೆ ನೋಡದೆ ಪ್ರಮಾಣವಾಗ್ಲೂ.  ಎಂದು ಮತ್ತೊಮ್ಮೆ , ಯಾರೋ ಕಾಲೇಜ್ ಹುಡ್ಗ ಮೋಟಾರ್ ಸೈಕಲ್ ಎಕ್ಕಿಸಿ ಬಿಟ್ಟಿದ್ದಾನೆ ಎಂದೂ  ಆ ಗಾಡಿ ನಂಬರ್ “ KA 31 ಜೀರೋ ಪೈವ್ ಎಫ್  ಎಂದು ಮುಂದಕ್ಕೆ ಯಾವುದೋ ಹತ್ತು ಅಂಕಿಗಳ ಮೊಬೈಲ್ ನಂಬರ್ ನ್ನು ಕರಾರುವಾಕ್ಕಾಗಿ ಹೇಳುತ್ತಿದ್ದ ! ಯಾರೂ ಕೇಳಿಸಿಕೊಳ್ಳದ್ದಿದ್ದರೂ !.

ಅದೇ ಗುಂಪಿನಲ್ಲಿದ್ದ ಬಗಲಿನಲ್ಲಿ ಒಂದು ಬಟ್ಟೆ ಬ್ಯಾಗನ್ನು ಹಾಕಿಕೊಂಡಿದ್ದ  ಹಕ್ಕಿಪಿಕ್ಕಿಯವನೊಬ್ಬ ಒಬ್ಬೊಬ್ಬರನ್ನೇ ಪಿಸು ಮಾತಿನಲ್ಲಿ ಮಾತನಾಡಿಸುತ್ತಾ ಕಂಕುಳಿನಲ್ಲಿದ್ದ ಬ್ಯಾಗಿನಿಂದ  ಮಾಂಸಾ ಕತ್ತರಿಸುವ ಎರಡು ಮಚ್ಚನ್ನು ತೋರಿಸುತ್ತಾ  ಮಾರಾಟ ಮಾಡಲು ಗಿರಾಕಿಯನ್ನು ಕುದುರಿಸುತ್ತಿದ್ದ .

ಎರಡು ಗಂಟೆಗಳ ಕಾಲ ರಸ್ತೆ ಬಂದ್ ಆಚರಿಸಿದ ನಾಡು-ನುಡಿ ನೆಲ -ಜಲ ರಕ್ಷಿಸುವ ಜನರು ಮರಗಳು ರೋಡಲ್ಲೇ ಇವೆ . ಇವನ್ನೆಲ್ಲಾ ಕಡಿದು ರಸ್ತೆ ಅಗಲ ಮಾಡಿ . ರೋಡೇಕ್ಸ್ಗೂ ಲೈಟ್ ಹಾಕ್ಸಿ ! ಬೇಕೆ ಬೇಕು ನ್ಯಾಯ ಬೇಕು ಎಂದು ಕೂಗುತ್ತಿದ್ದರು. ಯಾವ ನ್ಯಾಯ ಎಂದು ಯಾರಿಗೂ ತಿಳಿದಿರಲಿಲ್ಲ ! ಯಾರು ನ್ಯಾಯ ಕೊಡಬೇಕು? ಎಂಬುದರಲ್ಲೂ ಗೊಂದಲಗಳಿದ್ದವು .

ಕೊನೆಯಲ್ಲಿ ಬಂದ ಪಶುವೈದ್ಯರು , ಸತ್ತ ಚಿರತೆಯನ್ನು ಆಂಬುಲೆನ್ಸಿನಲ್ಲಿ ಎತ್ತಾಕಿಕೊಂಡು ದೊಡ್ಡಾಸ್ಪತ್ರೆಗೆ ಹೋದರೂ . ಪೋಸ್ಟ್ ಮಾಟಮ್ ಮಾಡಲು. ಕುಯ್ಯೋ ಕುಯ್ಯೋ ಎಂದು ಬಹುದೂರ ಸಾಗಿ , ಶಬ್ದ ಕ್ಷೀಣಿಸಿ ಕಣ್ಮರೆಯಾಯಿತು.

ಜನ ಚದುರಿದರು ಚಡ್ಡಿ ದರಿಸಿದ್ದ ಬೋರಣ್ಣ ಮೂರು ಹಿಡಿ ಮಣ್ಣು ತಂದು ರೋಡಿನಲ್ಲಾದ ರಕ್ತದ ಕಲೆಯ ಮೇಲೆ ಸುರಿದ , ಇನ್ನೂ ಕೆಲವರು ಅವನನ್ನೇ ಅನುಸರಿಸದರು ಮಾರನೇ ದಿನ ಚಿರತೆ ಸತ್ತ ಜಾಗದಲ್ಲಿ . ಜೋರಾಗಿ ಪೆಯೋ ಎನಿಸಿಕೊಂಡು ಬರುವ ಮೋಟರ್ ಬೈಕಿನವರು ಬೆನ್ನು . ದೊಡ್ಡ ರೋಡ್ ಹಂಪ್ ಹಾಕಿದರು ಅದೇ ರಸ್ತೆಯಲ್ಲಿ ಮುಂದೆ ಇರುವ ಬೆನ್ನು ಹುರಿ ಸೂಪರ್ ಸ್ಪೆಶಾಲಿಟಿ ಆಸ್ಪತ್ರೆಗೆ . ಮುರಿದು ಕೊಳ್ಳುತ್ತಿದ್ದಾರೆ .ದಾಖಲಾಗುತ್ತಿದ್ದಾರೆ 2X4 ಅಡಿ ಚಿರತೆಯ ಫೋಟೋ ಹಾಕಿದರು ಚಿರತೆ ಕಾಣಿಸಿ ಕೊಂಡರೆ ಯಾರಿಗೆ . ತಿಳಿಸಬೇಕು ಎಂಬ ಮಾಹಿತಿಯನ್ನು ಹೊರತುಪಡಿಸಿ, ವನ್ಯಜೀವಿಗಳ ಬಗ್ಗೆ ಇರುವ ಎಲ್ಲಾ ಕಾನೂನುಗಳನ್ನು ಸವಿವರವಾಗಿ ಸಣ್ಣ ಅಕ್ಷರದಲ್ಲಿ ನಮೂದಿಸಿದ್ದರು..

ಸತ್ತ ಚಿರತೆಯನ್ನು ಜನ ಮರೆತರು ಗೌರ್ಮೆಂಟ್ ಮರೆಯಿತು ., ಹೊಸ ನ್ಯೂಸ್ ಬಂತು ನಮಗೆ . ಇನ್ನೊಮ್ಮೆ ಚಿರತೆ ಸುದ್ದಿಯಾಗೋದು ಅದು ಸತ್ತಾಗ ಮಾತ್ರ .





# ಹವ್ಯಾಸವೆಲ್ಲಾ ಖಗೋಳಮಯ !

ಅಕ್ಟೋಬರ್ ತಿಂಗಳ ಸಂಜೆ ಸುಮಾರು ಆರೂವರೆ ಯಷ್ಟರ ಹೊತ್ತಿಗೆ ಖಾಲಿ ನೀಲಿ ಆಕಾಶ, ಇನ್ನೇನು ಟೆಲಿಸ್ಕೋಪ್ ಅಥವಾ ಬೈನಾಕ್ಯುಲರ್ ಸೆಟ್ ಮಾಡಿಕೊಂಡು ಆಕಾಶದ ಕಡೆ ಮುಖ ಮಾಡಬೇಕು ಎನ್ನುವಷ್ಟರಲ್ಲಿ ಎಲ್ಲಿಂದಲ್ಲೋ ಆವರಿಸಿಕೊಳ್ಳುವ ಮೋಡಗಳು!

ಅದೂ ಅಂತರಿಕ್ಷದ ವಿಶೇಷ ವಿದ್ಯಮಾನಗಳ ವೀಕ್ಷಣೆಯ ಸಮಯಕ್ಕೆ ಸರಿಯಾಗಿ ಕೈಕೊಡುವ ಮೋಡಗಳು ಅಧ್ಯಯನಕ್ಕೆ ವಿಶೇಷ ಅಡ್ಡಿಯಾಗುತ್ತವೆ. ಪ್ರತಿದಿನ, ಪ್ರತಿ ವಿಶೇಷ ವೀಕ್ಷಣೆಯ ದಿನಗಳಂದು ಒಂದಿಲ್ಲೊಂದು ಅಡ್ಡಿ ಆತಂಕಗಳಿಗೆ ಗುರಿಯಾಗುವ ಪ್ರಕೃತಿಯ ನಿಗೂಢ ವಾದ ಅಂತರಿಕ್ಷ ವೀಕ್ಷಣೆ ಮತ್ತು ಅಧ್ಯಯನ ಖಗೋಳಾಭ್ಯಾಸಿಗಳಿಗೆ ಅದರಲ್ಲೂ ವಿಶೇಷವಾಗಿ ಹವ್ಯಾಸಿ ಖಗೋಳ ವಿಜ್ಞಾನಿಗಳಿಗೆ ಅತಿಹೆಚ್ಚಿನ ಸವಾಲು. ಹೀಗಾಗಿ ಪ್ರಕೃತಿಯ ಅಧೀನದಲ್ಲಿರುವ ಅಂತರಿಕ್ಷದ ವಿದ್ಯಮಾನಗಳು ಅತ್ಯಂತ ತಾಳ್ಮೆಯನ್ನು ಬೇಡುವ ಕೆಲಸ. ಇತ್ತೀಚಿನ ದಿನಗಳಲ್ಲಿ ವೃತ್ತಿಪರ ಖಗೋಳ ವಿಜ್ಞಾನಿಗಳಷ್ಟೇ ಶ್ರಮವನ್ನು, ಅದಕ್ಕೂ ಹೆಚ್ಚಿನ ಪರಿಶ್ರಮವನ್ನು ಹವ್ಯಾಸಿ ಖಗೋಳಾಭ್ಯಾಸಿಗಳು ಅನುಭವಿಸುತ್ತಿದ್ದಾರೆ ಎಂದು ಹೇಳಬಹುದು. ಇತ್ತಿಚಿನ ದಿನಗಳಲ್ಲಿ ಹೆಚ್ಚುತ್ತಿರುವ ಅಂತರಿಕ್ಷ ವಿದ್ಯಮಾನಗಳ ಬಗೆಗಿನ ಅರಿವು ಮತ್ತು ತಿಳುವಳಿಕೆಗಳ ಪರಿಣಾಮವಾಗಿ ಖಗೋಳ ವಿಜ್ಞಾನ ಕ್ಷೇತ್ರದಲ್ಲಿ ಹವ್ಯಾಸಿ ಖಗೋಳಾಸಕ್ತರ ಪಡೆಯೇ ಸಿದ್ದವಾಗುತ್ತಿದೆ.



ಹೆಚ್ಚಿನ ಆಸಕ್ತಿ ಮತ್ತು ಉತ್ಸಾಹದಿಂದ ತಮ್ಮ ನೆಚ್ಚಿನ ಕ್ಷೇತ್ರದಲ್ಲಿ ಖಗೋಳ ವೀಕ್ಷಣೆ ಮತ್ತು ಸಂಶೋಧನೆಯನ್ನು ಮುಂದುವರೆಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಹವ್ಯಾಸಿ ಖಗೋಳ ವಿಜ್ಞಾನಿಯಾಗಿ ಸೇವೆ ಸಲ್ಲಿಸುತ್ತಿರುವ ಹದಿ ಹರೆಯದ ತರುಣ ಬೆಂಗಳೂರಿನಲ್ಲಿ ವಾಸವಾಗಿರುವ ಅಮರ್ ಶರ್ಮ ಅವರ ಹೆಸರನ್ನು ಹೇಳಲೇಬೇಕಾಗುತ್ತದೆ.

**ಧೂಮಕೇತುವಿನ ಬೆನ್ನ ಹತ್ತಿ..**

ಇತ್ತೀಚೆಗೆ ಹೆಚ್ಚು ಚರ್ಚೆಯಾಗುತ್ತಿರುವ ಧೂಮಕೇತುಗಳೆಂಬ ಆಕಾಶಕಾಯಗಳ ಬಗ್ಗೆ ಹೇಳಬೇಕೆಂದರೆ ಧೂಮಕೇತುಗಳು ಸೌರಮಂಡಲಕ್ಕೆ ಸೇರಿದ ಅತಿಚಿಕ್ಕ ಕಾಯಗಳು. ಉದ್ದನೆಯ ಬಾಲದ ಕಾರಣ ಅವಕ್ಕೆ ಈ ವಿಶೇಷ ಹೆಸರು. ಪ್ರಕೃತಿಯ ವಿಸ್ಮಯಗಳಲ್ಲಿ ಧೂಮಕೇತು ಸಹಾ ವಿಶಿಷ್ಟವಾದುದು. ಏಕೆಂದರೆ ಅದು ಬ್ರಹ್ಮಾಂಡದ ವಿಸ್ಮಯಗಳನ್ನು ತನ್ನ ಉಡಿಯಲ್ಲಿ ಹಾಕಿಕೊಂಡಿದೆ ಎಂಬ ಕಾರಣಕ್ಕಾಗಿ ವೃತ್ತಿಪರ ಖಗೋಳಜ್ಞರು ಮತ್ತು ಹವ್ಯಾಸಿ ಖಗೋಳ ತಜ್ಞರು ಆಸಕ್ತರು ಅದರ ಬೆನ್ನಹತ್ತಿರುವುದು ವಿಶೇಷ.

ಐತಿಹಾಸಿಕವಾಗಿ ಯಾವುದೋ ದುರಂತಕ್ಕೆ ಸಾಕ್ಷಿಯಾಗುತ್ತಿದ್ದ ಧೂಮಕೇತುಗಳೆಂಬ ಆಕಾಶಕಾಯಗಳು ಇತ್ತೀಚಿನ ದಿನಗಳಲ್ಲಿ ಜನಸಾಮಾನ್ಯರ ಕುತೂಹಲ, ಖಗೋಳ ವಿಜ್ಞಾನಿಗಳ, ಹವ್ಯಾಸಿ ಖಗೋಳ ಆಸಕ್ತರ ಅಧ್ಯಯನದ ವಸ್ತುವಾಗಿ, ವಿಶೇಷ ಆಕಾಶ ಕಾಯಗಳಾಗಿ ಗುರುತಿಸಲ್ಪಡುತ್ತಿರುವುದು ಸಂತಸದ ಸಂಗತಿ. ಭಯದ ಕಣ್ಣುಗಳೀಗ ಕುತೂಹಲದ ಕಣ್ಣುಗಳಾಗಿ ಬದಲಾಗುತ್ತಿರುವುದು ಕೂಡಾ ವಿಶೇಷ. ಐತಿಹಾಸಿಕವಾಗಿ ಹಲವಾರು ಧೂಮಕೇತುಗಳು ಕಂಡು ಹಿಡಿಯಲ್ಪಟ್ಟಿವೆ ಮತ್ತು ವೀಕ್ಷಣೆಗೆ ಒದಗಿವೆ. 2013 ರಲ್ಲಿ ಬರಿಯಗಣ್ಣಿಗೆ ಪ್ರಕಾಶಮಾನವಾಗಿ ಕಾಣುವಂಥದ್ದು ಎಂದು ಅತಿಹೆಚ್ಚು ಅಬ್ಬರ ಮತ್ತು ಪ್ರಚಾರ ಹುಟ್ಟಿಸಿದ್ದ 'ಐಸಾನ್' ಧೂಮಕೇತು ನಿರಾಸೆಯನ್ನು ಹುಟ್ಟಿಸಿ ಬಂದಷ್ಟೇ ವೇಗವಾಗಿ ಮಾಯವಾಯಿತು. ಇದೀಗ ಲವ್ ಜಾಯ್ ಧೂಮಕೇತುವಿನ ಸರದಿ. ಈ ಹಿನ್ನೆಲೆಯಲ್ಲಿ ನಮ್ಮ ಭಾರತದ ಹಲವಾರು ವಿಜ್ಞಾನಿಗಳು ಮತ್ತು ಹವ್ಯಾಸಿ ಖಗೋಳ ವಿಜ್ಞಾನಿಗಳು ಧೂಮಕೇತು ಕುರಿತ ಅಧ್ಯಯನ ಮತ್ತು ವೀಕ್ಷಣೆಯನ್ನು ಕೈಗೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಧೂಮಕೇತುವನ್ನು ಕಂಡುಹಿಡಿದ ಮೊದಲ ಭಾರತೀಯರು ವೈನುಬಾಪು. ಬಾಪು-ಬಾಕ್-ನ್ಯೂಕರ್ಕ್ ಹೆಸರಿನ ಈ ಧೂಮಕೇತುವನ್ನು ವೈನುಬಾಪು 1951 ರಲ್ಲಿ ಕಂಡು ಹಿಡಿದಿದ್ದರು. ಈಗಾಗಲೇ ಹಲವರು ಇದರ ಬಗ್ಗೆ ದಾಖಲಿಸಿದ್ದಾರೆ. ಆದರೆ ಅವರು ಸಂಶೋಧಿಸಿದ ಮೂಲಪ್ರತಿ ಹಾರ್ವರ್ಡ್ ವೀಕ್ಷಣಾಲಯದ ಸಂಗ್ರಹದಲ್ಲಿತ್ತು. ತಮ್ಮ ವೈಯಕ್ತಿಕ ಆಸಕ್ತಿ ಮತ್ತು ಅಸ್ಥೆಯಿಂದ ಅಂತರರಾಷ್ಟ್ರೀಯ ಮಟ್ಟದ ಖಗೋಳ ವಿಜ್ಞಾನಿಗಳ ಜೊತೆ ಸಂಭಾಷಣೆ ನಡೆಸಿ, ಅದರ ಬಗ್ಗೆ ಮುಖ್ಯ ವಿವರಗಳನ್ನು ಕಲೆ ಹಾಕಿ ಅದನ್ನು ಬೆಳಕಿಗೆ ತಂದ ಯಶಸ್ಸು ಹವ್ಯಾಸಿ ಖಗೋಳ ವಿಜ್ಞಾನಿ ಅಮರ್ ಶರ್ಮ ಅವರಿಗೆ ಸಲ್ಲುತ್ತದೆ

ಪ್ರಕೃತಿಯ ಅಧೀನದಲ್ಲಿರುವ ಖಗೋಳ ವಿಜ್ಞಾನ ಕ್ಷೇತ್ರದ ಹವ್ಯಾಸಿಗಳಿಗೆ ಬೇಕಾದ ಅಪಾರ ತಾಳ್ಮೆ, ಆತ್ಮವಿಶ್ವಾಸ, ಸಮರ್ಪಣೆ, ಸುಂದರವಾದ ಕನಸು ಎಲ್ಲವನ್ನೂ ಕಟ್ಟಿಕೊಂಡು ಹೊರಟವರಂತೆ ಕಾಣುವ ಅಮರ್

ಅವರಂಥ ಹವ್ಯಾಸಿಗೆ ಅಂತರಿಕ್ಷ ಅಂದಾಕ್ಷಣ ಮಿಂಚೊಂದು ಅವರ ಕಣ್ಣುಗಳಲ್ಲಿ ಸುಳಿದಾಡುತ್ತದೆ. ಇದು ಅಮರ್ ಶರ್ಮ ಅವರಂಥ ಉತ್ಸಾಹಿ ಹವ್ಯಾಸಿ ಖಗೋಳ ವಿಜ್ಞಾನಿಯೊಬ್ಬರ ಕತೆಯಲ್ಲ. ಅಂತರಿಕ್ಷದ ವಿದ್ಯಮಾನಗಳನ್ನು ಪ್ರಕೃತಿಯ ರಹಸ್ಯಗಳನ್ನ ಬೇಧಿಸ ಹೊರಟವರಿಗೆ ಯಾವತ್ತೂ ಮುಗಿಯದ ಕುತೂಹಲ, ಸವಾಲು ಈ  ಖಗೋಳ.

**ಖಗೋಳ ವಿಜ್ಞಾನ ವೆಂದರೆ"...ಸುಲಭ ಮತ್ತು ಕಷ್ಟದ ಕೆಲಸ"' !**

"ಖಗೋಳ ವಿಜ್ಞಾನ ಎನ್ನುವುದು ಯಾವುದೋ ಲೌಕಿಕವಾದವನ್ನು ಹುಡುಕುವುದಲ್ಲ. 'ಯಾವುದೇ ಷರತ್ತುಗಳಿಲ್ಲದ ತೀವ್ರ ಭಾವಾಭಿವ್ಯಕ್ತಿ '(unconditional passion).  ಖಗೋಳ ವಿಜ್ಞಾನವೆನ್ನುವುದು ಬರಿಯ ಜ್ಞಾನವಲ್ಲ, ಅದರಿಂದ ಏನು ಪ್ರಯೋಜನ ಎನ್ನುವುದಲ್ಲ . ಅದು ಕೇವಲ ಜ್ಞಾನವಲ್ಲ..ಜೀವನದ ಪಯಣ."

"ಖಗೋಳ ಅಧ್ಯಯನದಲ್ಲಿ ನಿರತವಾಗಿರುವವರಲ್ಲಿ ವೈಯಕ್ತಿಕ ಅದೃಷ್ಟ ಮತ್ತು ಕುಟುಂಬದ ಬೆಂಬಲ ಇರಲೇಬೇಕಾಗುತ್ತದೆ. ಯಾವುದೇ ಮಾನದಂಡಗಳನ್ನಿಟ್ಟುಕೊಳ್ಳದೆ ಎಷ್ಟು ಗಂಟೆಗಳ ಕಾಲ ಕೆಲಸ ಮಾಡಿದೆ, ಹಣವನ್ನು ಎಷ್ಟು ವ್ಯಯ ಮಾಡಿದೆ ಅದರಿಂದ ನನಗೇನು ಲಾಭವಾಯಿತು ಎನ್ನದೆ ಈ ಕ್ಷೇತ್ರದಲ್ಲಿ ಮುಂದುವರಿಯ ಬೇಕು ಅನ್ನುವುದಾದರೆ ಹಣದ ಅವಶ್ಯಕತೆ ಹೆಚ್ಚು. ದಿನದ ಹೆಚ್ಚಿನ ಪಾಲು ಕತ್ತಲಿನಲ್ಲಿಯೇ ಕೆಲಸ ಮಾಡಬೇಕಾಗುತ್ತದೆ. ಹವ್ಯಾಸಿ ಖಗೋಳ ವಿಜ್ಞಾನಿ ಬಹುತೇಕ  ಹೊರಗೆ ಕೆಲಸ ಮಾಡಬೇಕಾಗುತ್ತದೆ..ಒಂದೇ ಕಡೆ ಕುಳಿತು ಕೆಲಸ ಮಾಡುವಂತಿಲ್ಲ. .ಸಮಯದ ಪರಿವೆಯಿಲ್ಲದೆ, ದೂರದ ಸ್ಥಳಗಳಿಗೆ ಪ್ರಯಾಣ.  ಹೆಚ್ಚಿನ ಪಾಲು ಒಂಟಿಯಾಗಿಯೇ ಕುಳಿತು ಕೆಲಸ ಮಾಡಬೇಕಾಗುತ್ತದೆ." ತಮ್ಮ ಜೀವನವನ್ನೇ ಖಗೋಳ ಅಧ್ಯಯನಕ್ಕೆ ಮೀಸಲಾದ ಹವ್ಯಾಸಿಗಳಿಗೆ ಅಧ್ಯಯನದ ಪ್ರತಿಕ್ಷಣವೂ ಸವಾಲು.



**ಮೋಡಗಳೇ, ಮೋಡಗಳು..!**

"ಖಗೋಳ ವಿಜ್ಞಾನಿಗೆ ಮೋಡಗಳು ಸ್ನೇಹಿತನೂ ಹೌದು ವೈರಿಯೂ ಹೌದು. ಯಾವುದೇ ಖಗೋಳ ಅಧ್ಯಯನವನ್ನು ಪ್ರಾರಂಭಿಸುವ ಸಮಯದಲ್ಲಿ ಎಲ್ಲಿಂದಲ್ಲೋ ಹಾಜರಾಗುವ ಮೋಡಗಳು ಹವ್ಯಾಸಿ ಖಗೋಳ ವಿಜ್ಞಾನಿಗಳ ಅದರಲ್ಲು ಹವ್ಯಾಸಿಗಳ ತಾಳ್ಮೆಯನ್ನು ಒರೆಗೆ ಹಚ್ಚುತ್ತವೆ. ತಾಳ್ಮೆಯನ್ನು ಪರೀಕ್ಷಿಸುವ' ಭೂಮಿತಾಯಿ " (Mother Nature) ಒಂದಲ್ಲ ಒಂದು ದಿನ ಕರುಣೆ ತೋರಿಯೇ ತೋರುತ್ತಾಳೆ! "

ಅಸ್ಟ್ರೋನಾಮಿಕಲ್ ಅಸೋಸಿಯೇಷನ್ ಆಫ್ ಬ್ಯಾಂಗಲೋರ್ ಅಮೆಚೂರ್ ಅಸ್ಟ್ರಾನಮರ್ಸ್ (ABAA) ಮತ್ತು ಬೆಂಗಳೂರು ಅಸ್ಟ್ರೋನಾಮಿಕಲ್ ಸೊಸೈಟಿ (BAS) ಹವ್ಯಾಸಿ ಖಗೋಳ ವಿಜ್ಞಾನಕ್ಕೆ ಮೀಸಲಾದ ಎರಡು ಮುಖ್ಯ ಸಂಸ್ಥೆಗಳು. ಇವುಗಳ ಸದಸ್ಯರು ಪ್ರತಿವಾರ ಸಭೆ ಸೇರಿ ಖಗೋಳ ವಿದ್ಯಮಾನಗಳ ಬಗ್ಗೆ ಚರ್ಚಿಸುತ್ತಾರೆ. ವಿಶೇಷ ಖಗೋಳ ವಿದ್ಯಮಾನಗಳ ಸಮಯದಲ್ಲಿ ಜವಾಹರ ನೆಹರು ತಾರಾಲಯದ ಆವರಣದಲ್ಲಿ ಮತ್ತು ವಿವಿಧೆಡೆಯಲ್ಲಿ ಜನ ಸಾಮಾನ್ಯರು, ಮಕ್ಕಳು, ಖಗೋಳಾಸಕ್ತರನ್ನು ಕಲೆ ಹಾಕಿ ಏರ್ಪಡಸಿ ವಿಶೇಷ ವೀಕ್ಷಣೆಯ ಕಾರ್ಯಕ್ರಮಗಳನ್ನು ಏರ್ಪಾಟು ಮಾಡುವ ಮೂಲಕ ತಮ್ಮದೇ ಆದ ಸೇವೆಯನ್ನು ಸಲ್ಲಿಸುತ್ತಾರೆ





# ಭೂಮಿಗೆ ಬರಲಿದೆ 6ನೇ ಮಹಾ ನಿರ್ನಾಮ

ನೂರಿಪ್ಪತ್ತು ವರ್ಷಗಳ ಹಿಂದೆ ಮೂರು ಬಿಲಿಯನ್ ಅಂದರೆ ಲಕ್ಷ ಗಟ್ಟಲೆ ಇದ್ದ ಪ್ಯಾಸಿಂಜರ್ ಪಿಜನ್ ಗಳು ಆಕಾಶದಲ್ಲಿ ಹಾರುತ್ತಿದ್ದರೆ ಊರಿಗೆ ಊರೇ ಕತ್ತಲು ಕವಿಯುತ್ತಿತ್ತು . ಅಂತಹ ಅಘಾದ ಸಂಖ್ಯೆಯ ಪ್ಯಾಸಿಂಜರ್ ಪಿಜನ್ ಗಳನ್ನು ಕೇವಲ ಹತ್ತು ವರುಷಗಳಲ್ಲಿ ಮೂರು ಬಿಲಿಯನ್ ನಿಂದ ಕೇವಲ ಒಂದಕ್ಕೆ ಇಳಿಸಿದ ಖ್ಯಾತಿ ಮಾನವರಾದ ನಮಗೆ ಸಲ್ಲ ಬೇಕು. ಸೆಪ್ಟೆಂಬರ್ 1911 ರಂದು ಬದುಕಿದ್ದ ಆ ಒಂದು ಕೊನೆ ಪ್ಯಾಸಿಂಜರ್ ಪಿಜನ್ ಕೂಡ ಕೊನೆಯುಸಿರೆಳೆಯಿತು . ಭೂಮಿಯ ಮೇಲೆ ಹೇಳ ಹೆಸರಿಲ್ಲದಂತೆ ನಿರ್ನಾಮ-ನಿರ್ವಂಶವಾಯಿತು .

ನಮಗೆ ದೊರೆಕಿರುವ ಪಳಯುಳಿಕೆಗಳ ಪ್ರಕಾರ ಅನಾಧಿಕಾಲದಲ್ಲಿ ಬದುಕಿದ್ದ ಸುಮಾರು ಮುಕ್ಕಾಲು ಪಾಲು ಜೀವಿಗಳು ಅವನತಿ ಒಂದಿವೆ ಎಂದು ಹೇಳಬಹುದು . ಇಂತಹ ಮಹಾ ಅವನತಿಗಳು ಭೂಮಿಯ ಮೇಲೆ ಐದು ಭಾರಿ ಸಂಭವಿಸಿದೆ ಎಂದು ಕೂಡ ವಿಜ್ಞಾನಿಗಳು ಕರಾರುವಾಕ್ಕಾಗಿ ತಿಳಿಸಿದ್ದಾರೆ .













ಮಾನವರಾದ ನಾವು ಮಾಡುತ್ತಿರುವ ಪ್ರತಿಯೊಂದು ಕಾರ್ಯ ದಿಂದಲೂ ಪ್ರಾಣಿಗಳ ಆವಾಸದ ಮೇಲೆ ನೇರ ಪರಿಣಾಮ ಬೀರಿದೆ . ಇದರಿಂದಾಗಿ ನಾವು ಅನೇಕ ಜೀವ ಪ್ರಭೇದಗಳ ಅವನತಿಯ ಅಂಚಿಗೆ ತಳ್ಳಿದ್ದೇವೆ. ಮೇಷಿಗನ್ ಯೂನಿವರ್ಸಿಟಿಯ ಅನಿತಾ ನಿರ್ವಾಣಿ ಎಂಬ ಜೀವ ವಿಜ್ಞಾನಿಯು ದಿನೇ ದಿನೇ ನಾವು ಕಳೆದುಕೊಳ್ಳುತ್ತಿರುವ ಜೀವ ಪ್ರಭೇದಗಳ ಕುರಿತು ತುರ್ತಾಗಿ ಗಮನಿಸ ಬೇಕಾದ ವಿಷಯ ಎಂದಿದ್ದಾರೆ . ಅವು ಕೊಡುವ ಸೇವೆಗಳು ನಮಗೆ ಸಿಗದಿದ್ದರೆ ಜೀವ ವ್ಯವಸ್ಥೆ ಅಸಮತೋಲನ ವಾಗಬಹುದು, ಮರಗಳು ನಮಗೆ ಉಸಿರಾಡಲು ಗಾಳಿ ಕೊಡುತ್ತವೆ. ವಾತಾವರಣವನ್ನು ಶುದ್ಧೀಕರಿಸುತ್ತವೆ . ನೀರನ್ನು ಸಂಗ್ರಹಿಸಿ ಇಡುತ್ತವೆ. ಅವು ಮಾಡುವ ಬೀಜಪ್ರಸಾರದಿಂದ ಕಾಡು ಸಂವೃದ್ಧಿಯಾಗುತ್ತದೆ. ಇವುಗಳಿಂದಲೇ ನಮಗೆ ಔಷಧಿಗಳು, ವಸತಿ, ಆಹಾರ ಸಿಗುತ್ತಿರುವುದು ಎಂಬುದರ ಬಗ್ಗೆ ಅಧ್ಯಯನ ನಡೆಸಿದ ಅನಿತಾ ನಿರ್ವಾಣಿಯವರು "ಜೀವ ವೈವಿಧ್ಯದಿಂದ ನಮಗೆ ಅನೇಕ ಅನುಕೂಲಗಳು ಇದ್ದರೂ ಸಹ ಅವುಗಳ ಸಂಖ್ಯೆ ದಿನೇ ದಿನೇ ವೇಗವಾಗಿ ಕ್ಷೀಣಿಸುತ್ತಿವೆ. ಇದೇ ಪ್ರಮಾಣದಲ್ಲಿ ಅವನತಿ ಮುಂದುವರಿದರೆ ಇನ್ನೂ 300 ವರ್ಷಗಳಲ್ಲಿ ಭೂಮಿಯಲ್ಲಿ 6ನೇ ಮಹಾ ನಿರ್ನಾಮವಾಗಲಿದೆ ಎಂದು ಎಚ್ಚರಿಸಿದ್ದಾರೆ.





ಈಗಾಗಲೇ ಮನೆಯಂಗಳದಲ್ಲಿ ಚಿಲಿಪಿಲಿಗುಟ್ಟುತ್ತಿದ್ದ ಗುಬ್ಬಚ್ಚಿಗಳು ಕಣ್ಮರೆಯಾಗುತ್ತಿವೆ . ಈಗ ಗುಬ್ಬಚ್ಚಿಗಳ ಸಾಲನ್ನೇ ಹಿಡಿದ ಊರು ಕಾಗೆಗಳು, ಮೈನಗಳು ದಿನೇ ದಿನೆ ಕಣ್ಮರೆಯಾಗುತ್ತಿವೆ. ಅವು ಎಲ್ಲಿಗೋ ಟ್ರಿಪ್ ಹೋಗುತ್ತಿಲ್ಲ ! ಆಹಾರದ ಕೊರತೆ, ವಿಷಾಹಾರ ಸೇವನೆ , ಗೂಡು ಕಟ್ಟಿ ಮಾರಿಮಾಡಲು ಸರಿಯಾದ ಆವಾಸ ಇಲ್ಲದಿರುವುದರಿಂದಾಗಿ ಸಂಖ್ಯೆ ಕ್ಷೀಣಿಸುತ್ತಿದೆ . ನಮ್ಮ ದಿನನಿತ್ಯದ ಚಟುವಟಿಕೆಗಳಿಂದಾಗಿ ಎಷ್ಟು ವೇಗವಾಗಿ ಜೀವಿಗಳು ಕಾಣೆಯಾಗುತ್ತಿವೆಯೆಂದರೆ ಅವುಗಳ ಲೆಕ್ಕ ಹಾಕಲೂ ಸಹ ವಿಜ್ಞಾನಿಗಳ ಕೈಯಲ್ಲಿ ಸಾಧ್ಯವಾಗುತ್ತಿಲ್ಲ . ಈಗಿರುವಾಗ ಅವು ಪಳಯುಳಿಕೆಯಾಗಿ ಉಳಿಯುವುದು ಅನುಮಾನವೇ?



# ಮಿಡತೆಯ ನಡತೆ

ಪ್ರತಿ ವರ್ಷದಂತೆ ಮುಂಗಾರು ಮಳೆಯ ಆಗಮನ ಸಕಾಲದಲ್ಲಿ ಆಗಲಿಲ್ಲ, ಕೆಲವೊಮ್ಮೆ ಆಗಿದ್ದರೂ ಬಾಲ್ಯದ ಆ ನೆನಪಿನ ವರ್ಷಧಾರೆ ಮತ್ತೆ ಬಂದೀತೇ? ಮುಸುಲ ವರ್ಷಧಾರೆ ಪ್ರತಿ ವರ್ಷ ಕ್ಷೀಣಿಸುತ್ತಲೇ ಇದೆ . ಇವೆಲ್ಲ ಮಾನವ ನಿರ್ಮಿತ ಕಾರಣಗಳೆನ್ನುವುದು .ವಾತಾವರಣದ ಅನೇಕ ವೈಪರೀತ್ಯಗಳು ಇವಕ್ಕೆ ಕಾರಣ .ಆಘಾತಕಾರಿ

ಶಾಲೆಯ ಮೈದಾನದ ಮಕ್ಕಳ ಚೀರಾಟದ ನಡುವೆ ಕೀಟಗಳ ಮಾರ್ದನಿ ಶುರುವಾಗುವುದನ್ನು ಕಿವಿ ಅಲಿಸ ತೊಡಗಿತುತನ್ನ ಜಮೀನಿನಲ್ಲಿ ಉಳುಮೆಗಾಗಿ ಕ .ಸೂರ್ಯಾಸ್ತದ ಸಮಯ .ಣ್ಣುಬ್ಬಿಸಿ, ಮೇಲೆ ಅಂಗೈ ಇರಿಸಿ ಮಳೆಮೇಘಗಳಿಗೆ ಕಾಯುವ ಕಾಲ ಕಣ್ಮರೆಯಾಗುತ್ತಿದೆತನ್ನ ಕೆಲಸ ಶುರು ಮಾಡಿಕೊಳ್ಳಲು ಕಾತುರದಿಂದ . ಮಾನವಮಾತ್ರರಿಗೆ ಕಾಫಿ .ಕಾಯುತ್ತಿದ್ದ ಹಳ್ಳಿಯ ಬೀದಿ ದೀಪಗಳು ಜಗಮಗಿಸಲಾರಂಭಿಸಿದವು, ಟೀ ಆಹ್ಲಾದಿಸುವ ಸಮಯನಭೋ .ನಮ್ಮ ಭೂ ಮಂಡಲದ ಕೋಟ್ಯಾನು ಕೀಟಗಳ ಕೀಟಲೆ ಆರಂಭಿಸುವ ಸಮಯವೂ ಕೂಡ . ಲದಲ್ಲಿ ಕತ್ತಲು ಹೆಚ್ಚಿದಂತೆ ಮನುಷ್ಯನ ಪ್ರಕ್ರಿಯೆಗಳು ಕಡಿಮೆಯಾದಂತೆ ಅನೇಕ ಜೀವಜಂತುಗಳು ತಮ್ಮ ಮಂಡ ಪ್ರಕ್ರಿಯೆಗಳನ್ನು ಶುರುಮಾಡುತ್ತವೆ, ದಿನದ ಬೆಳಕುಉಷ್ಣದ ಚೆಲ್ಲಾಟದಲ್ಲಿ ತಮ್ಮದೇ ಆದ ಸಿಂಫನಿಗಳಲ್ಲಿ ತೊಡಗಿ - ದಣಿದಸಿಕಾಡಗಳು ಆಶ್ರಯ ಹುಡುಕುತ್ತಿವೆಕತ್ತಲೆಯ ಆಗಮನವೆಂದರೆ ಇವುಗಳಿಗೆ ವಿಶ್ರಾಂತಿಯ . .ರೆ ಮನುಷ್ಯನಿಗಿರುವ ನೆಮ್ಮದಿ ಇಲ್ಲದೇ ನಿರಂತರ ಭಯದಿಂದ ಕೂಡಿದ ಭ್ರಾಂತಿಸಮಯವೇನೋ ಸರಿ ಆದ

ಆಶ್ರಮದ ಮಾನವ ನಿರ್ಮಿತ ಅರಣ್ಯದ ಎಲ್ಲಿಂದಲೋ ಭಯಾನಕ ಆರ್ತನಾದವೆಂಬಂತೆ ಅಲೆಗಳು ತೇಲಿ ಬಂದು ಕಿವಿಗೆ ತಾಗುತ್ತದೆ. ಹೀಗೆ ಹಿಂದೊಮ್ಮೆ ಕೇಳಿದ ನೆನಪು. ಸಿಕಾಡಾ ಚೀರುವ ತರಂಗಾಂತರದ ಪರಿಚಯವಿದ್ದರೂ ಈಗ ಕೇಳಿದ್ದು ಅನುಮಾನಾಸ್ಪದ. ಸರಿ ಏನೇ ಆದರೂ ಹುಡುಕುವ ಎಂದು ರೂಮಿಗೆ ಹೋಗಿ ಟಾರ್ಚ್ ಹಿಡಿದು ತಂದೆ. ಈವತ್ತಂತೂ ಆರ್ತನಾದಕ್ಕೆ ಕಿವಿ ಟ್ಯೂನ್ ಆಗಿ ಎಲ್ಲಾ ಶಬ್ಧಗಳೆಲ್ಲ ಆರ್ತನಾದವೆಂಬ ಭಾಸ. ಈ ಶಬ್ಧ ಸರೌಂಡ್ ಎಫೆಕ್ಟ್ ಇದ್ದದ್ದರಿಂದ ಸಿಕ್ಕ ಸಿಕ್ಕ ಕಡೆಯಲ್ಲೆಲ್ಲ ಬೆಳಕು ಹಾಯಿಸಬೇಕಾಯಿತು. ಹತ್ತಿರವಾದಂತೆಲ್ಲ ಗೊಂದಲ ಹೆಚ್ಚುತ್ತದೆ. ಆ ಕಗತ್ತಲಲ್ಲಿ ಹುಡುಕುವುದು ಗೂಗಲ್ ನಲ್ಲಿ ಹುಡುಕುವಷ್ಟು ಸುಲಭಸಾಧ್ಯವಲ್ಲ. ಕಡೆಗೂ ಸಿಕ್ಕಿತು ಸಿಕಾಡಾ!. ಹೌದು! ಆ ಶಬ್ಧ ಸಿಕಾಡದೇ.....ಆರ್ತನಾದವೇ ಹೌದು.. ದಣಿದು ವಿಶ್ರಮಿಸಿದ್ದ ಸಿಕಾಡವೊಂದು ಮಿಡತೆಗೆ ಬಲಿಪಶುವಾಗಿದೆ! ಪ್ರಕೃತಿಯ ಮರ್ಮ ನೋಡಿ



ಬೇಟೆಗಳನ್ನು ಬೆನ್ನತ್ತಿ ಹೋಗಿ ಎರಡೂ ದೇಹಗಳು ದಣಿವಾಗಿ ಅನೇಕ ಬಾರಿ ಕಣ್ಮುಂದಿದ್ದರೂ ಸುಸ್ತಿನಿಂದ ಏನೂ ಮಾಡಲಿಕ್ಕಾಗದ ಸ್ಥಿತಿಯಲ್ಲಿ ಕೈತಪ್ಪಿಹೋಗುವುದುಂಟು. ಮಿಡತೆಗಳಿಗೆ ಈ ಪ್ರಮೇಯ ಬಾರದು. ಅದಿರಲಿ ಮಿಡತೆಗಳ ಇಂಗ್ಲೀಷ್ ನಾಮಧೇಯದಲ್ಲಿ grass ಎಂಬ ಶಬ್ಧದಿಂದ ಇವು ಸಸ್ಯಾಹಾರಿಗಳು, ಹುಲ್ಲು ತಿನ್ನುವ ಅಮಾಯಕ ಜೀವಿಗಳು ಎಂದು ಭಾವಿಸಿದಿರೋ ಕೆಟ್ಟಿರಿ ಜೋಕೆ! ಪವರ್ಫುಲ್ ಬೇಟೆಗಾರ.

ಸಿಕಾಡಗಳು ವಿಶ್ರಮಿಸುವ ಸಮಯವೆಂದರೆ ಮಿಡತೆಗಳಿಗೆ ಬಲು ಪ್ರಿಯ. ಸಿಕಾಡಾ ಹಿಡಿದ ಮೇಲೆ ಅಂಗಾತಮಲಗಿಸಿ ಸಿಕ್ಕ ಸಿಕ್ಕ ಕಡೆ ಉಗ್ರನರಸಿಂಹನಂತೆ ಸಿಗಿದು ಹೊಟ್ಟೆಯ ಭಾಗವನ್ನು ಬಗಿದು ಹಾಕುತ್ತದೆ. ಸಂಗೀತದ ಸಿಂಫನಿ ಡೆತ್ ನೋಟಾಗುತ್ತದೆ. ಪ್ರತಿ ಸೆಕೆಂಡ್ ಇದೇ ತರಹ ನಡೆಯುವ ಪ್ರಕೃತಿಯಲ್ಲಿ ಅಂಬ್ಯುಲೆನ್ಸ್ ತರಲಾದೀತೇ. ಇದು ಜೀವವಿಕಾಸ ಕಣ್ರೀ! ಕ್ರೌರ್ಯವೆನಿಸಿದರೂ ಉಳಿವಿಕೆಯ ಹೋರಾಟವೆಂದು ಬೆರಗು ಮಿಶ್ರಿತವಾಗಿ ನೋಡುತ ನಿಂತೆ. ಡಾರ್ವಿನ್ ಪಿತಾಮಹ ಹೇಳಿ ಬಿಟ್ಟಿದ್ದಾನೆ.

ಅನೇಕ ಕೀಟಗಳಲ್ಲಿರುವಂತೆ ಈ ಶಬ್ಧ ಒಣ ಪದರಗಳ ತಿಕ್ಕಾಟದಿಂದ ಸೃಷ್ಟಿಯಾದದ್ದಲ್ಲ. ಸಿಕಾಡಗಳಿಗೆ ಟಿಂಬಾಲ್ ಎಂಬ ಸ್ನಾಯು ಹಿಗ್ಗುವಿಕೆ ಕುಗ್ಗುವಿಕೆಯಿಂದ ಉತ್ಪಾದನೆಯಾಗುವ ಕಂಪನ. ನಾವು ನಾಲಿಗೆಯಿಂದ ಈ ರೀತಿಯ ಶಬ್ಧ ಸೃಷ್ಟಿಸಬಹುದು ಆದರೆ ಅದರಷ್ಟು ವೇಗವಾಗಿ ಊಹಿಸಲೂ ಸಾಧ್ಯವಿಲ್ಲ. ಮಂದ್ರಸ್ಥಾಯಿಯ ಕಂಪನದ ನಡುವೆ ಕ್ಲಿಕ್ ಶಬ್ಧ ಉಂಟಾಗುತ್ತದೆ. ಗಾಳಿಚೀಲಗಳ ಮೂಲಕ ಹಾಡುಬರುವುದರಿಂದ ವೂಫರ್ ಎಫೆಕ್ಟ್ ಕೂಡ ಸಿಗುತ್ತದೆ. ಇಷ್ಟೆಲ್ಲ ಇದ್ದರೂ ಒಂದು ರೀತಿಯ ನೀರಸ ಸಂಗೀತವೇ ಅನಿಸುತ್ತದೆ. ನಮ್ಮ ಹಲವು ಸಂಗೀತಗಳನ್ನು ಕೇಳಿದರೆ ಅವು ಮೂರ್ಛೆ ಹೋಗಿ ಇನ್ನು ಸಾಹಿತ್ಯವೇನಾದರೂ ಅರ್ಥವಾದರೆ ಸತ್ತೇ ಹೋಗಬಹುದೇನೋ.

ಅನೇಕ ಬಾರಿ ದೇಹದ ಹೊರಕವಚವನ್ನು ಬಿಟ್ಟು ಸಿಪ್ಪೆ ಮಾತ್ರ ಮರದ ಮೇಲೆ ಕಂಡರೆ ನಿಜವಾದ ಸಿಕಾಡಾ ಇಷ್ಟು ಸುಲಭವಾಗಿ ಸಿಗುವುದೇ ಎಂಬ ಅನುಮಾನ ಹುಟ್ಟುತ್ತದೆ. ಬಲು ಸೂಕ್ಷ್ಮ ಪದರವಾದ್ದರಿಂದ ಹಿಡಿದುಕೊಂಡರೆ  ಬೆರಳುಗಳಲ್ಲಿ ಸೂಕ್ಷ್ಮತೆ ಹೆಚ್ಚಿಸುತ್ತದೆ. ಆದರೂ ಸಂಗೀತ ರಸಸಂಜೆಯ ಈ ಸಂಗೀತಕ್ಕೆ ಜುಗಲ್ ಬಂದಿಗಾಗಿ ಸಾಥ್ ಕೊಡುವವರು ನಮ್ಮ ಮಂಡೂಕೋಪನಿಷತ್ತಿನ ಕೂಪಗಳು. ಮಿಡತೆಗಳ ಸಂಗೀತ ಕಪ್ಪೆಗಳಷ್ಟು ಮನೋಹರವಲ್ಲ. ಅವುಗಳು ಸೃಷ್ಟಿಸುವ ಕಂಪನಗಳು ಅದ್ಭುತವೇ ಸರಿ. ಇತ್ತೀಚೆಗೆ ಪಶ್ಚಿಮಘಟ್ಟಗಳಲ್ಲಿ ಕಂಡುಹಿಡಿದಿರುವ ಕಪ್ಪೆಗಳ ಜೀವನ ವೈಭವೋಪೂರಿತ.



ಸಂಜೆಯ ರವಿಯ ಕೊನೇ ಕಿರಣ ಕರಗುವ ವೇಳೆ ಎಷ್ಟು ರಸಮಯವಾಗಿರುತ್ತದೋ ಅಷ್ಟೇ ಭಯಾನಕ ಕೂಡ. ವಾಹನ, ಟಿ.ವಿ,  ಮನೆಯ ಜಗಳಗಳು ಇವುಗಳ ಮಧ್ಯೆ ಮುಳುಗಿರುವ ಮಾನವ ಸಂಕುಲಕ್ಕೆ ಈ ಭಯದ ಅರ್ಥವೇ ಇಲ್ಲ. ಇಂತ ಸಮಯದಲ್ಲಿ ವಾಕಿಂಗ್ ಹೊರಟರೆ ತರಗೆಲೆಯ ಮೇಲೆ ತರ ತರನಾದ ತರಾ ತರ ಶಬ್ಧ ಕೇಳಿಸಿದರೆ ಯಾರಿಗಾದರೂ ಭಯ ಹುಟ್ಟುವುದುಂಟು. ಒಣ ಎಲೆಯೇ, ಹಾವೇ, ಹಲ್ಲಿಯೇ, ಓತಿಯೇ, ಪ್ರಾಣಿಯ ಹೆಜ್ಜೆಯೇ..... ಈ ರೀತಿಯ ಅನೇಕ ಪ್ರಶ್ನೆಗಳಿಗೆ ನಾಂದಿ ಹಾಡುತ್ತದೆ.

ಮಳೆಗಾಲದಲ್ಲಿ ಮಳೆ ಅಕಾಲಿಕವಾದಾಗ ಅನೇಕ ರೀತಿಯ ಪರಿವರ್ತನೆಗಳು ಕಾಣಸಿಗುವುವು. ಚೈತ್ರ ಮಾಸದಲ್ಲಿ ಈ ಶಬ್ಧಾರ್ತಿಕ ಪ್ರಶ್ನೆಗಳಿಗೆ ಉತ್ತರಕೊಡುವುದು ಟೋಡ್ ಗಳು. ಅಪಾಯ ಸುಳಿದೊಡನೆ ಡಿಸ್ಕ್ ಬ್ರೇಕ್ ಹಾಕಿದಂತೆ ಗಪ್ ಚುಪ್ ಆಗಿ ಆತುರಾತುರವಾಗಿ ಮಣ್ಣಿನೊಳಗೋ, ಕಲ್ಲಿನ ಕೆಳಗೋ ಅವಿತು ಮತ್ತೆ ಪ್ಲೇ ಮಾಡುತ್ತವೆ. ಕಿವಿ ಆಲಿಸಿದಂತೆಲ್ಲ ಸಂಗೀತಮಯ ಪ್ರಶ್ನೋತ್ತರಗಳು ಗೋಚರವಾಗುತ್ತದೆ. ಈ ಕಪ್ಪೇಷಿಗಳ ಕ್ಲಿಕ್ ಕ್ಲಕ ಕ್ಲಿಕ್ ಕ್ಲಕ್ ಮೌಸ್ ಕ್ಲಿಕ್ ಸರಮಾಲೆಯನ್ನು ತಡರಾತ್ರಿಯವರೆಗೂ ಹೆಣೆಯುತ್ತವೆ. ಮನುಷ್ಯ ಮಾತ್ರೇಣ ಈ ರೀತಿ ಇದ್ದಿದ್ದರೆ ಯಾವ ಜಗಳ, ಅಸೂಯೇ, ಬೈಗುಳ, ಹೊಗಳಿಕೆ ಇತ್ಯಾದಿಗಳಿಗೆ ಆಸ್ಪದವಿರುತ್ತಿರಲಿಲ್ಲ. ಚಿಕ್ಕಂದಿನಲ್ಲಿ ಸಿಗುತ್ತಿದ್ದ ತಿರುಗಣಿಯಂತ ವಸ್ತು ಈ ರೀತಿಯ ಶಬ್ಧ ಉತ್ಪಾದಿಸುತ್ತಿದ್ದ ನೆನಪು. ಯಾವುದೇ ತಲೆಬುಡವಿಲ್ಲದೇ ಪ್ರಕೃತಿಯಲ್ಲಿ ಅನೇಕ ಸಂಗೀತ ಕಛೇರಿಗಳು ಹೀಗೆಯೇ ಇರುತ್ತವೆ. ಕೇಳಕೇಳಿದಂತೆಲ್ಲ ಸಂಗೀತಕ್ಕೂ ಶಬ್ಧಕ್ಕೂ ಇರುವ ವ್ಯತ್ಯಾಸ ಅರಿಯುವುದು ಕಷ್ಟ ಸಾಧ್ಯವಾಗುತ್ತದೆ. ಅನೇಕ ಜೀವರಾಶಿಯಲ್ಲಿದ್ದಂತೆ ಮಿಡತೆಗಳಲ್ಲಿಯೂ ಈ ಶಬ್ಧವೇ ಪರಿಣಯದ ಸಂಕೇತ.



ನಸುಕಿನ ಪಯಣದಲ್ಲಿ ಕಿವಿ ಆಲಿಸುವ ಇತರೆ ಪ್ರಣಯ ಸಂಕೇತಗಳಲ್ಲಿ ಕಪ್ಪೆಗಳೊಡನೆ ಹಕ್ಕಿಗಳು ಸೇರಿಕೊಳ್ಳುತ್ತವೆ. ವಿಶಿಷ್ಟವಾದವುಗಳೆಂದರೆ ನೈಟ್ ಜಾರ್ ಮತ್ತು ಗೂಬೆಗಳು. ಸ್ಕಾಪ್ಸ್ ಗೂಬೆಯೊಂದು ಒಮ್ಮೆ ನಮ್ಮ ಟಾರ್ಚ್ ಕಣ್ಣಿಗೆ ಸಿಕ್ಕಿತು. ಉ....... ಉ ಶಬ್ಧದೊಂದಿಗೆ ಚಂದ್ರನತ್ತ ಉಗಿಯುವ ಆ ಕ್ರಿಯೆ ಕೂದಲನ್ನು ನಿಮಿರಿಸುವಲ್ಲಿ ಯಶಸ್ವಿಯಾಗುತ್ತದೆ. 'ಏನೋ ನಿನಗೆ ಎರಡು ಕೊಂಬಿದೆಯ' ಎನ್ನುವ ಬೈಗುಳ ಪ್ರಶ್ನೆಗೆ ಉತ್ತರಿಸುವ ಈ ಗೂಬೆಗೆ ಎರಡು ಪುಕ್ಕದ ಕೊಂಬುಗಳಿವೆ. ಈ ರೀತಿ ಹಲವಾರು ಗೂಬೆಗಳು ಅಟೆಂಡೆನ್ಸ್ ಹಾಕುತ್ತಿದ್ದಂತೆ ವಾತಾವರಣ ವಿಚಲಿತವಾಗುತ್ತದೆ. ಮಿಡತೆಗಳೆಲ್ಲ ಸೈಲೆನ್ಸರ್ ಅಳವಡಿಸಿದಂತೆ ಪ್ರಾಣಭಯದಿಂದ ಒಂದೆರಡು ಕ್ಷಣ 'ಗೂಬೆಗಳಾಗುತ್ತವೆ'. ಪುನಃ ತಮ್ಮ ಹುಟ್ಟುಗುಣ(ಇನ್ಸ್ಟಿಂಕ್ಟ್) ಬಿಡಲಾರದೇ ಸಿಂಫನಿ ಶುರುಮಾಡುತ್ತವೆ. ಆ ಹಸಿರು ಮಿಡತೆಯ ಕ್ಲಿಕ್ ಕ್ಲಕ್ ಬಹಳ ಕ್ಷೀಣಿಸಿ ಶಬ್ಧಾಂಧಕಾರದಲ್ಲಿ ಮುಳುಗಿಹೋಯಿತು. ಯಾವಾಗೋ ಒಮ್ಮೆ ನಿಶಬ್ಧವೆಂಬುದು ತೂರಿ ಬಂದಾಗ ಕೇಳಿಸುವಂತಿತ್ತು.

ಶಾಲೆಯಲ್ಲೊಮ್ಮೆ ಹುಡುಗರು ಕಲ್ಲು ಹೊಡೆದು ಮಂಕಾಗಿದ್ದ ಗೂಬೆಯೊಂದನ್ನು ರಕ್ಷಿಸಿದ್ದೆವು. ಎಷ್ಟೇ ಸ್ಪೂರ್ತಿಕರ ವಾತಾವರಣ ನಿರ್ಮಿಸಿದರೂ, ವರ್ಷಗಟ್ಟಲೆ ಭೋದಿಸಿದರೂ ಹುಟ್ಟು ಗುಣ ಸುಟ್ಟರೂ ಹೋಗೋದಿಲ್ಲ ನೋಡಿ. ಇನ್ಸ್ಟಿಂಕ್ಟ್ ಮುಂದೆ ಬ್ರಹ್ಮನೂ ತಲೆಬಾಗಿದನೇನೋ! ಆ ಹುಡುಗರಿಗೆ ಕಲ್ಲು ಹೊಡೆದು ತನ್ನ ಗುರಿ ನಿಖರವಾಗಿರುವುದನ್ನು ಕಂಡು ಎಲ್ಲಿಲ್ಲದ ಸಂತಸ. ಕೊನೆಗೆ ಗೂಬೆಯನ್ನು ಹಿಡಿದು ತಲೆ ಸವರಿ ನೀರು ಕುಡಿಸಿದೆವು.



ಒಂದೆರಡು ದಿನ ಏನೂ ಮಾಡಲು ತೋಚದೆ ತೋಟದಲ್ಲಿ ರೂಮಿನ ಬಳಿ ಪಾಳು ಬಿದ್ದ ಶೌಚಾಲಯದಲ್ಲಿ(ಹೀನವೆನಿಸಬಹುದು) ಇರಿಸಿದ್ದೆವು. ನಮ್ಮ ಹೊಟ್ಟೆಯ ತಾಳದಂತೆ ಎರಡು ದಿನ ಮೂರು ಬಾರಿ ಭೇಟಿ ನೀಡಿ ಆಹಾರ ತಿನ್ನಿಸಿ ನೀರು ಕುಡಿಸುವುದೆಂದು ತೀರ್ಮಾನ. ಆಹಾರವೇನೆಂದು ಜಾಲತಾಣದಲ್ಲಿ ಹುಡುಕಾಡಿದಾಗ, ರಕ್ಷಣೆಗೆ ಬಂದದ್ದು ಈ ಮಿಡತೆ! ಶುರು ಮಾಡಿದೆವು ನಮ್ಮ ಮಿಡತೆ ಬೇಟೆ. ಬೇಡವೆಂದಾಗ ಕಂಡ ಕಂಡಲ್ಲಿ ಎಗರಿ, ಶಪಿಸಿದಾಗ ಕಾಲ ಮೇಲೆ ಎಗರಿ ಕೂರುತ್ತಿದ್ದ ಇವು ನಮ್ಮ ಮನಸ್ಸಿನ ಯೋಚನೆಯರಿತು ಒಟ್ಟಿಗೆ ಮಾತನಾಡಿಕೊಂಡು ಕಣ್ಮರೆಯಾದಂತೆ ಅನ್ನಿಸಿತು. ಒಂದಾದರು ಬೇಡವೆ?! ವಿರಳವಾಗಿದ್ದ ಸ್ಕ್ಯಾಪ್ಸ್ ಔಲ್ ಹೇಗಾದರೂ ಬದುಕಿಸಬೇಕೆಂಬ ಇಂಗಿತ. ಹುಲ್ಲುಗಾವಿಲನ ರೀತಿಯಿದ್ದ ಜಾಗ ಹುಡುಕಾಡಿ ಹಲವು ಮಿಡತೆಗಳನ್ನು ಹಿಡಿದೆವು. ತನ್ನ ಸಾವಿನಂಚಿನ ಪಯಣ ಅರಿತಿದ್ದ ಗೂಬೆಗೆ ತಿನ್ನಿಸುವುದಾದರೂ ಹೇಗೆ? ಮೆದುವಾದ ಭಾಗ ತಿನ್ನಿಸಬೇಕಾದ್ದರಿಂದ ಕಾಲುಗಳನ್ನು, ತಲೆಭಾಗವನ್ನು ಡಿಸೆಕ್ಟ್ ಮಾಡಬೇಕಾಗಿತ್ತು. ಗರಗಸದಂತಿದ್ದ ಅದರ ಕಾಲುಗಳು ಕಬ್ಬಿಣವೆಂಬಂತೆ ಭಾಸವಾಗಿ ಮುರಿಯಲು ಕಷ್ಟಸಾಧ್ಯವಾಯಿತು. ಗಟ್ಟಿ ಮನಸ್ಸು ಮಾಡಿ ಅಶ್ವಥ ರುಂಡ ಮುಂಡದ ಭಾಗಗಳನ್ನು ಬೇರ್ಪಡಿಸಿದ. ಹೊಟ್ಟೆ ದ್ರವರೀತಿಯ ಭಾಗವನ್ನು ತಿನ್ನಿಸಿದಾಗ ಆರಂಭದಲ್ಲಿ ದಿಕ್ಕರಿಸಿತಾದರೂ ಕೊಂಚ ಕೊಂಚ ಸವಿಯತೊಡಗಿತು. ಮಧ್ಯಾಹ್ನ ಎರಡು ಮೂರು ಮಿಡತೆ ತಿನ್ನಿಸಿ ನೀರು ಕೂಡಿಸಿದಾಗ ಜೀರ್ಣಿಸಿ ಹಿಕ್ಕೆಯೂ ಇಟ್ಟಿತು. ಹೀಗೊಂದು ನೆನಪು.

ಮಿಡತೆಯ ಶಬ್ಧಾಯುಧಗಳು ಡ್ರಮ್ ಮತ್ತು ಕಡ್ಡಿಯಂತಿರುವ ಸ್ಕ್ರೇಪರ್. ತಮಟೆ ನುಡಿಸಿದ ಹಾಗೆ. ಕೂಡುವ ಕಾಲ ಬಂದಾಗ ಮಿಡತೆಗಳು ಶಬ್ಧ ಸೃಷ್ಟಿಸುವುದುಂಟು. ಹಿಂಗಾಲುಗಳ ಮಧ್ಯದಲ್ಲಿ ಗರಗಸದಂತ ಕಡ್ಡಿಯಿದ್ದು ಮುಂದಿನ ರೆಕ್ಕೆಗಳ ಪದರದ ಮೇಲೆ ಕೆರೆಯುತ್ತದೆ. ಸ್ಟ್ರೀಡ್ಯುಲೇಷನ್ ಎನ್ನುತ್ತಾರೆ. ಡೆಸಿಬೆಲ್ ಅಳತೆದಲ್ಲಿ ಸಿಕಾಡಗಳಿಗೆ ಪೈಪೋಟಿಯೇ ಸರಿ. ಆದರೆ ಕೀಟಲೋಕದಲ್ಲಿ ಸಿಕಾಡಗಳಿಗೆ ಸಂಗೀತದ ಆಸ್ಕರ್ ಲಭಿಸುತ್ತದೆ.

ಇವು ಲೋಕಸ್ಟ್(lowcaste ಅಲ್ಲ) ಜಾತಿಗೆ ಸೇರುತ್ತವೆಯಾದರೂ ಒವಿಪಾಸಿಟರ್, ದೇಹದ ವಿಭಜನೆಗಳು, ಇನ್ನಿತರೆ ಸೂಕ್ಷ್ಮಗುಣಗಳಿಂದ ಬೇರ್ಪಡಿಸಲಾಗಿದೆ. ಇವು Caelifera ಗುಂಪಿಗೆ ಸೇರಿದರೆ ಲೋಕಸ್ಟ್ ಗಳು Encifera ಗುಂಪಿಗೆ ಸೇರಿಸಲಾಗಿದೆ. ಲೋಕಸ್ಟ್ ಗಳು ವಿಶ್ವ ಪ್ರಸಿದ್ಧ. ಏಕೆಂದರೆ ಮಿಲಿಯನ್ ಸಂಖ್ಯೆಯಲ್ಲಿ ರೋಮನ್ ಆರ್ಮಿಯಂತೆ ಆಕ್ರಮಿಸಿ, ಮೋಡದಂತೆ ಸುತ್ತುವರಿದು ಕ್ಷಣ ಮಾತ್ರದಲ್ಲಿ ದಾರಿಯಲ್ಲಿ ಸಿಗುವ ಎಕರೆಗಟ್ಟಲೆ ಫಸಲನ್ನು ಮ್ಯಾಜಿಕ್ ಮಾಡಿ ಮಾಯಾ ಮಾಡುತ್ತವೆ. ಈ ಗುಂಪುಗಾರಿಕೆಯ ಆಕ್ರಮಣಕ್ಕೆ ಒಣ ಹವೆ, ಮರುಭೂಮಿಯಂತ ರಾಷ್ಟ್ರಗಳು ತತ್ತರಿಸಿವೆ. ಈ ವಿಷಯದಲ್ಲೊಂದೇ ಅಲ್ಲದೇ ಜೀವ ವೈವಿಧ್ಯದ ವಿಸ್ಮಯವೇ ಎನ್ನಬಹುದಾದ ಕೀಟ ಪ್ರಪಂಚದ ಯಾವುದೇ ಸ್ಪೀಷಿಯೊಂದನ್ನೂ ಕೂಡ ಮಾನವ ಸಂಪೂರ್ಣ ನಿರ್ನಾಮ ಮಾಡಿದ ಉದಾಹರಣೆಯಿಲ್ಲ.



ನಮ್ಮ ಕುಂಟ್ ಮಿಡತೆಗಳು ಅಷ್ಟೇನೂ ಆಘಾತಕಾರಿ ಅಲ್ಲ ಬಿಡಿ. ಒಂಟಿತನ ಬೇರೆ. ಆದರೆ ಸಿಕಾಡಗಳಿಗೆ ಇವು ಹೆಬ್ಬುಲಿಗಳೇ ಸರಿ. ಸಿಕಾಡಗಳ ಜೀವನಚಕ್ರ ಬೇರೆ ಬೇರೆ ಇದ್ದು ಕೆಲವೊಮ್ಮೆ 13, 17 ವರ್ಷದ ವರೆಗೂ ಹೋಗಬಹುದು. ಅಷ್ಟು ಚಿಕ್ಕ ಜೀವಕ್ಕೆ ಇದು ಮನುಷ್ಯನ ಸಾವಿರ ವರ್ಷ ಆಯಸ್ಸು. ಅಷ್ಟು ವರ್ಷಗಳ ಬಳಿಕ ನೆಲದಿಂದ ಬರುವ ಹೊತ್ತಿಗೆ ಮಿಡತೆ, ಮ್ಯಾಂಟಿಸ್ ಗಳ ಕೈಯಯಲ್ಲಿ ಬಗೆಸಿಕೊಂಡರೆ ಹೇಗೆ?

ಅದೇನೇ ಇರಲಿ ಈಗ ನಡೆಯುತ್ತಿರುವ ಮನುಷ್ಯನ ದಬ್ಬಾಳಿಕೆ ಮಿತಿಮೀರಿದೆ. ದಿನವೊಂದು ಕಾದಿದೆ....ಮಾನವ ಮುಂದುವರೆದು, ಮುಂದುವರೆದೂ ಅತೀ ಮುಂದುವರೆದು ಕಣ್ಮುಂದೆಯೇ ಕಣ್ಮರೆಯಾಗುವ ಆ ದಿನ. ನಾಗರೀಕತೆಯ ಅನಾಗರೀಕತೆಯಲ್ಲಿ ಮುಳುಗಿ ಹೊರಬರಲಾರದ ಆ ದಿನ! ಆ ದಿನಾ  ನಮ್ಮ ಮಿಡತೆಗಳ, ಸಿಕಾಡಗಳ, ನೆಲಗಪ್ಪೆಗಳ, ಗೂಬೆಗಳ ಕ್ಲಿ ಕ್ಲಾಕ್ , ತಂಗ್, ಊ ...ನಿರಂತರ ನಡೆಯುತ್ತಲೇ ಇರುತ್ತವೆ. ಮಿಲಿಯನ್ ವರ್ಷಗಳ ಹಿಂದಿನಿಂದ ಹಾಡುತ್ತಲಿವೆ ಮುಂದೆಯೂ ನಿಲ್ಲದಿರೆ ಆ ರಸಮಯ ಸಂಗೀತ.

ಮಿಡತೆಗಳು ವಾತಾವರಣದ ವೈಪರೀತ್ಯದಂತೆ ಗೋಚರಿಸುತ್ತವೆ. ವಿಜ್ಞಾನಿಯೊಬ್ಬ ಮಿಡತೆಯ ಸಂಬಂಧಿ, ಕ್ರಿಕೆಟ್ ಗಳು ನಿಮಿಷಕ್ಕೆಷ್ಟು ಚಿರ್ಪಿಂಗ್ ಮಾಡುತ್ತವೆಂದು ಲೆಕ್ಕ ಹಾಕಿ ವಾತಾವರಣದ ಉಷ್ಣತೆ ಅಳೆಯುವ ಸೂತ್ರ ಕೊಟ್ಟಿದ್ದಾನೆ.

$T = 50 + (N-4)/4$. ಅಂದರೆ ಇವು ಬದುಕಿರುವ ಉಷ್ಣತಾ ಮಾಪಕವಿದ್ದಂತೆ(living thermometers).

ಕಳೆದ ವರ್ಷ ಯಾವುದೋ ಕಂಪ್ಯೂಟರ್ ಗೇಮ್ ಆಡಿದಂತೆ ಭಾಸವಾಗುತಿತ್ತು. ಎಲ್ಲೆಲ್ಲಿ ನೋಡಿದರೂ ಅವೇ. Omocestus viridulas ಎಂಬ ಹಸಿರು ಮಿಡತೆ ಚೆಂದದ ಕೀಟವೆ ಸರಿ. ತಿಳಿ ಗಿಳಿ ಹಸಿರ ದೇಹ, ಎರಡು ಬಿಳಿ ನಾಮ ಪಟ್ಟೆಗಳು. ರೆಕ್ಕೆಯ ರಚನೆ, ಪರದೆಯಂತ ರೆಕ್ಕೆ ಮೇಲ್ಮೈ, ಬಟಾಣಿಯಂತ ಕಣ್ಣುಗಳು, ರೇಡಿಯೋ ಅಂಟೆನಾಗಳಂತ ಪ್ರತ್ಯೇಕ ಕಂಟ್ರೋಲ್ ಇರುವ ಮೀಸೆಗಳು. ಸಾವಿರಾರು ಜಾತಿಯ ಮಿಡತೆಗಳಲ್ಲಿ ಯಥೇಚ್ಚವಾಗಿ ಸಿಗುವವು. ಆದರೆ ನಿಶಾಚರಿಗಳು. ಮುಂಭಾಗದ Mandibles ಆಹಾರವನ್ನು ಸೀಳಲು ಮತ್ತು ಹೋಸ್ಟ್ ಗಿಡ ಕತ್ತರಿಸಿ ಲೋಚಕಿಸಲು ಮುಖ್ಯ ಪಾತ್ರವಹಿಸುತ್ತವೆ.

ಹಲವು ಮಿಡತೆಗಳನ್ನು ಕೂಡಿ ಹಾಕಿ ಬೆಳಸಿದ ಪ್ರಯೋಗದಲ್ಲಿ, ಎಷ್ಟು ಹುಲ್ಲು ಹಾಕಿದರೂ ಜೊಲ್ಲು ಸುರಿಸದೆ ಸ್ವಲ್ಪವೇ ಮೆಲ್ಲುತ್ತದೆ. ಮನಸೆಲ್ಲಾ ರುಚಿ ರುಚಿಯಾದ ಮಾಂಸದ ಕಡೆ ವಾಲಿರುತ್ತದೆ ಎಂಬ ಅಂಶ ಗಮನಿಸಬಹುದು. ಯಾವುದೋ ಒಂದು ತಲೆಕೆಡಿಸಿಕೊಳ್ಳದೆ ಸಿಕ್ಕಿದ್ದೆ ಸೀರುಂಡೆ ಎನ್ನುವಂತೆ  ಹುಲ್ಲನ್ನು ಮೇಯುತಿತ್ತು. ಅತೀ ವಿಷಮ ಪರಿಸ್ಥಿತಿಯಲ್ಲಿ ಸಣ್ಣ ಸಣ್ಣ ಮಿಡತೆಗಳನ್ನು ದೊಡ್ಡವೂ ತಿಂದ ಉದಾಹರಣೆಗಳಿವೆ(Cannibalism)

ಮುಂಜಾವಿನ ಒಂದು ದಿನ ಅದೇ ರೀತಿಯ ಆರ್ತನಾದ ಶಬ್ಧವನ್ನು ಕಿವಿ ಸೆಳೆಯಿತು. ಮಂಪರಿನಲ್ಲಿದ್ದದ್ದರಿಂದ ಶಾಕ್ ಹೊಡೆದ ಅನುಭವ. ಹುಡುಕಾಡಿದಾಗ ಕಾಣಬೇಕೆ, ಹಸಿರು ಮಿಡತೆ... ಇನ್ನೊಂದು ಪಂಚನಯನಿ ಸಿಕಾಡವನ್ನು ಬಗೆದಗೆದಿದೆ. ತನ್ನ ಮುಂಡವನ್ನು ಅದರ ರುಂಡದೊಳಗಿರಿಸಿದೆ. ಸಿಕಾಡದ ಕಾಲುಗಳು

ಹಾರಿ ಹೋಗುತ್ತಿರುವ ಪ್ರಾಣಪಕ್ಷಿಯನ್ನು ಎಳೆಸೆಳೆವಂತೆ ಇನ್ನೂ ಅಲುಗಾಡುತ್ತಿವೆ. ಗಾಡ ನಿದ್ರೆಯಲ್ಲಿದ್ದ ಸಿಕಾಡವನ್ನು, ಬೆಳಕು ಭೂಮಿಯನ್ನು ಹರಿಯುವ ಮುನ್ನವೇ ನಡೆದ ಅಕ್ರಮಣ ಇದು. ಎಲ್ಲಾರು ಮಾಡುವುದು ಹೊಟ್ಟೆಗಾಗಿ.... ಅಚ್ಚರಿಯ ಸಂಗತಿ ನೋಡಿ. ಸಿಕಾಡದ ಆಸ್ವಾದದಲ್ಲಿ ಮೈಮರೆತಿದ್ದ ಮಿಡತೆಯನ್ನು ಗೂಬೆಯೊಂದು ಲೊಚಕ್ ಎನ್ನಿಸಿದ್ದ ಸಂದರ್ಭ.....ಏನೇ ಆಗಲಿ ಪ್ರಕೃತಿಯ ವೈಚಿತ್ರಕ್ಕೆ ತಲೆಬಾಗಲೇ ಬೇಕು. ಸಿಕಾಡದ ಬೋನಸ್ ಎಣಿಸದಿದ್ದ ಕೊಂಬಿನಗೂಬೆಗೆ ರುಚಿಸಿಕ್ಕಿರಬೇಕು.

ಮಿಡತೆ-ಸಿಕಾಡ ಬೇಟೆ, ಹುಲಿ-ಕಾಡೆಮ್ಮೆ ಬೇಟೆಯಿದ್ದಂತೆ. ಸಿಕಾಡವು ಸಾಕಷ್ಟು ಪ್ರತಿರೋಧ ಒಡ್ಡುವುದರಲ್ಲಿ ಅನುಮಾನವಿಲ್ಲ. ಸಿಕಾಡಗೆ ಯಾವುದೇ ಆಯುಧಗಳು ಸಿದ್ದಿ ಆಗದೆ ಇರುವುದರಿಂದ ಚೀರಾಟ ಒದ್ದಾಟಕ್ಕೆ ಅದರ ವರ್ತನೆ ಸೀಮಿತವಾಗಿದೆ. ಕೆಲವೊಮ್ಮೆ ಹುಚ್ಚು ಹಿಡಿದಂತೆ ಸಿಕಾಡವನ್ನು ಬೆನ್ನಟ್ಟುವ ಲೇಖನಗಳಿವೆ. ಆದರೆ ಅಹೋ ರಾತ್ರಿ ಬೇಟೆಯಾಡಿದಾಗ ಮಿಡತೆಯದು ಗರಿಷ್ಠ ಸಾಧ್ಯತೆಗಳು. ಎಲ್ಲ ಸಿಕಾಡಗಳು ವಿಶ್ರಾಂತಿಸುವ ವೇಳೆಯಲ್ಲಿ ಚೀರಾಟ ಕೇಳಿ ಬಂದು ಇನ್ನಷ್ಟು ಸಿಕಾಡಗಳು ನಿದ್ದೆ ಕೆಡಿಸುತ್ತವೆ.

ಮಿಡತೆಯನ್ನು ಮನೆಯಲ್ಲಿ ಕೂಡಿ ಹಾಕಿ ಬೆಳೆಸುವಾಗ ಹುಲ್ಲನ್ನು ಮನಸ್ಸಿಲ್ಲದ ಮನಸ್ಸಿನಿಂದ ತಿನ್ನುವ ಅಂಶ ಬೆಳಕಿಗೆ ಬಂದಿತ್ತು. ಆದರೆ ಕಷ್ಟಪಟ್ಟು ಸಿಕಾಡವನ್ನು ತಂದು ಹಾಕಿದರೆ ಮುಖದಲ್ಲಿ ಲವಲವಿಕೆ ಕುಣಿಕುಣಿದಾಡುತ್ತದೆ. ವಾರಕ್ಕೊಂದೋ ಎರಡೋ ಸಾಕು ನಾನಾ ಬಿಡಿ ಭಾಗಗಳ ಗ್ಯಾರೇಜ್ ನಂತಾಗುತ್ತದೆ. ಅದರಲ್ಲಿ ಮಾಯವಾಗಿರುವುದು ಹೊಟ್ಟೆಯಭಾಗ! ಸಿಕಾಡಗಳು ತಮ್ಮ ಬಾಯಿ ಭಾಗದಲ್ಲಿರುವ ಕೊಂಡಿ ಕೊಳವೆಗಳ ಮೂಲಕ ಮರ ಸಸಿಗಳ ದ್ರವವನ್ನು ಹೀರಿ ಜೀವಿಸುತ್ತದೆ. ಆ ಸಿಹಿ ದ್ರವ ಈ ಭಾಗದಲ್ಲಿರುವುದಕ್ಕೋ ಏನೋ ಮಿಡತೆ ಕಣ್ಣು ಅದರ ಹೊಟ್ಟೆಯ ಮೇಲೆ. ...ಸಾಧ್ಯತೆಗಳಿವೆ. ಆದರೆ ಎಲ್ಲಾಕಡೆ ಸಿಕಾಡಗಳಿಲ್ಲವಾದ್ದರಿಂದ ಬೇರೆ ಕೀಟಗಳು ಇದಕ್ಕೆ ಆಹಾರವಾಗಿರುತ್ತವಂತೆ. ಅನೇಕ ಬೀಟಲ್ ಗಳು ಕೂಡ..ಬೀಟಲ್ ಗಳಿಗಿರುವ ಮಜಬೂತಾದ ಹೊದಿಕೆ ಬಿಟ್ಟರೆ ಬೇರೆಲ್ಲಾ ಮೆಲ್ಲುತ್ತದೆ. ಸಿಕಾಡದ ಒಡೆತನ ಇಲ್ಲದ ಸೈಲೆಂಟ್ ವ್ಯಾಲಿಯಲ್ಲಿ ಮಿಡತೆಗಳ ರಾಜ್ಯಭಾರ ಕಂಡವರ್ಯಾರು.

ಈ ಮಾಂಸಾಹಾರಿ ಜೀವಿಗೆ ಬಹು ವಿಸ್ತಾರವಾದ ಖಾದ್ಯ ಪಟ್ಟಿ ಇದೆ. ಅದರ ಪ್ರಮುಖ ನಿರ್ಣಾಯಕ, ರುಚಿ ಮಾತ್ರ. ಸ್ವಜಾತಿ ಭಕ್ಷಕ ಗುಣ ಮಿಡತೆಗಳಲ್ಲಿ ಅಪರೂಪವೇನಿಸದರೂ ಮ್ಯಾಂಟಿಸ್ ನಷ್ಟು ವಿಚಿತ್ರವಲ್ಲ. ಸಾಮಾನ್ಯವಾಗಿ ಮಿಡತೆಗಳು ಒಂಟಿ ಬೇಟೆಗಾರ. ಗುಂಪಿನಲ್ಲಿ ಬಂಧಿತವಾಗಿದ್ದರೆ, First touch first eat ನಿಯಮ ಅನುಸರಿಸಿದಂತೆ ಯಾವುದು ಮೊದಲು ಬಾಯಿ ಹಾಕುತ್ತದೆಯೋ ಅದು ಒದ್ದು ಎಲ್ಲವನ್ನೂ ದೂರ ಇಟ್ಟು ತಿಂದು ಮತ್ತೊಂದಕ್ಕೆ ಬಿಡುತ್ತದೆ. ತಿಂದ ಮೇಲೆ ತನ್ನ ಬಾಯಿ ಕೊಂಡಿಗಳನ್ನು ತನ್ನ ಕಾಲುಗಳಿಂದ ಬ್ರಶ್ ಮಾಡುವ ಕ್ರಿಯೆ ಬಹಳ ಮನರಂಜಕ. ತಿಂದದ್ದನ್ನು ಸ್ವಚ್ಛಗೊಳಿಸುವುದಕ್ಕೋ ಅಥವಾ ಮುಂದಿನ ಭಕ್ಷಣೆಯ ತಯಾರಿಗೆ ಮಸಿಯುವಂತೆ ಭಾಸವಾಗುತ್ತದೆ. ಸಂಜೆಯಾಗಿ, ಕತ್ತಲಾಗುತ್ತಿದ್ದಂತೆ ಇವುಗಳ ಅನಿಮೇಷನ್ ಶುರುವಾಗುತ್ತದೆ. ಮೇಲೆ ಜಿಗಿದು ಹಾರಲೆತ್ನಿಸಿ ಬಡಿದುಕೊಂಡು ಬೀಳುತ್ತವೆ. ತಮ್ಮ ಮುಖ ಎದುರುಬದುರಾಗಿರಿಸಿ ಅಂಟೆನಾಗಳನ್ನು ಒಂದಕ್ಕೊಂದು ಶೋಕಿಸುತ್ತವೆ. ತುದಿ ಬಹಳ ಸಣ್ಣ ಇರುತ್ತವೆ. ಕಣ್ಣಿಗೆ ಅಷ್ಟು ಸಲೀಸಾಗಿ ಕಾಣಿಸುವುದಿಲ್ಲ, ಅವು

ಮುಟ್ಟಿದ್ದರೂ ನಿಮಿಷಗಟ್ಟಲೆ ಒಂದಕ್ಕೊಂದು ನೋಡಿ ಏನು ಮಾಡುತ್ತಿವೆ, ಸತ್ತವೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹೂ!! ಸಂತಾನೋತ್ಪತ್ತಿ ಪ್ರಕ್ರಿಯೆ. ನುರಿತ ಕಣ್ಣುಗಳಿಗೆ ಇದು ಗೋಚರಿಸುತ್ತದೆ. ಗಂಟೆಗಟ್ಟಲೆ ನಡೆಯುವ ಈ ಕ್ರಿಯೆ ನಿದ್ದೆ ಬರಿಸುವಂತಹದು. ಬೆಳಗೆದ್ದು ನೋಡಿದಾಗ ಹೆಣ್ಣಿಗೆ ಚೀಲವೊಂದು ಸೃಷ್ಟಿಯಾಗಿರುವುದು ಕಂಡಿತು. ಅದು ಓಡಾಡುವಾಗ ನೆಲ ಉಜ್ಜುತ್ತದೆ, ಮಣ್ಣಿನ ಧೂಳಿನ ಕಣಗಳು ಮೆತ್ತುಕೊಳ್ಳುತ್ತದೆ. ನಂತರ ಈ ಚೀಲದಲ್ಲಿರುವ ಮೊಟ್ಟೆಗಳನ್ನು ಖಾಲಿ ಮಾಡಿ ಸ್ರವಿಸಿರುವ ಪದಾರ್ಥವನ್ನು ಹಸು ಮೆಲಕು ಹಾಕುವಂತೆ ಅಗೆದು ಜಗಿದು ಗಂಟೆಗಟ್ಟಲೆ ತಿನ್ನುತ್ತದೆ. ಅವಕ್ಕೇನು ಟೆಂಷನ್.  ಓದಬೇಕಾ ಇಲ್ಲ ಸಂಪಾದನೆ ಮಾಡಬೇಕಾ.

ಮಿಡತೆಗಳಿಗೆ ಹೆಸರು, ಗುಣಗಳನ್ನು ಈಸೋಪನು "The Ant and the Grasshopper" ಕಥೆಯಲ್ಲಿ ಹೇಳಿದ್ದ. ಇವು ಸಮಯ ಸಾಧಕ ಕೀಟಗಳು. ಇರುವೆಯ ರೀತಿ ಶೇಖರಿಸುವ, ಭವಿಷ್ಯತ್ ಆಲೋಚನೆ ಇಲ್ಲವೆಂದು, ಚಳಿಗಾಲ ಬಂದಾಗ ಇರುವೆಯ ಹತ್ತಿರ ಅಂಗಾಲಾಚಿದಾಗ ಅದು ನಿರಾಕರಿಸಿ ಉಪವಾಸ ಇರುವಂತೆ ಮಾಡಿ ಬುದ್ಧಿ ಕಲಿಸುತ್ತವೆ. ಈಜಿಪ್ಟನ ನಾಗರೀಕತೆಯ ಅವಶೇಷಗಳಲ್ಲಿ ಸಿಕ್ಕಿರುವ ಬಿಲ್ಲೆಗಳಲ್ಲಿ ಮಿಡತೆ ಮುದ್ರಿತವಾಗಿರುವುದು ಗಮನಾರ್ಹ ಸಂಗತಿ.





# ಮಾಯಾಸೃಷ್ಟಿ

ಗುರುತ್ವದಿಂದ ವಿಶ್ವವಾಗಿ
ವಿಶ್ವವದು  ಭೂವಿಯಾಗಿ
ಭೂಕಂಪನ, ಜ್ವಾಲಾಮುಖಿ ಉಲ್ಕೆಗಳ ಅಪ್ಪಳಿಕೆಗೆ
ಧೂಮಕೇತುಗಳ ಗ್ರಹಣ ಋತುಮಾನಗಳ
ಹಗಲು ರಾತ್ರಿಗಳ ವಿಸ್ಮಯಗಳಿಂದ
ಭೂ ಜಲ ವಾಯುಗಳ ಸಮ್ಮಿಳನದಿಂದ
ಸೃಷ್ಟಿಯ ಅವತರಣಾ . . . !

ಕಣ ಅಣುವಾಗಿ
ಅಣು ಅಣುಗಳು ಜೀವಕೋಶವಾಗಿ
ಜೀವವಾಗಿ ಕೀಟವಾಗಿ ಗಿಡವಾಗಿ
ಮೀನಾಗಿ ಮಡ್ ಸ್ಕಿಪರ್ ಆಗಿ
ಉಭಯಜೀವಿಯಾಗಿ  ಹಾರುವ ಪಕ್ಷಿಯಾಗಿ
ಹಾವಾಗಿ  ಕೊನೆಗೆ ನಾವಾಗಿ ಸಾಗಿಹದು
ವಿಕಾಸದ ರಥ

ಮಣ್ಣಲ್ಲಿ  ಮೊಳಕೆಯಾಗಿ
ಕುಡಿಹಸಿರ ಹುಲ್ಲಾಗಿ
ಗಿಡವಾಗಿ ಮರವಾಗಿ ಹೂವಾಗಿ ಹಣ್ಣಾಗಿ
ಬೀಜವದು  ಕಾನನದ ಹಸಿರಾಗಿ
ಕೊನೆಗೆ ಮಾಯೆಯ್ತಾ ಕಾಣ್ಕೆ

